# ಕನಕ ಓದು

ಕನಕ ಅರಿವು ಶಿಬಿರದ ಕೈಪಿಡಿ

ಸಂಪಾದನೆ

**ಕಾ ತ ಚಿಕ್ಕಣ್ಣ**

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ

ಬೆಂಗಳೂರು

**ಕನಕ ಓದು – ಕನಕ ಅರಿವು ಶಿಬಿರದ ಕೈಪಿಡಿ**
**Kanaka Oodu-Kanaka Arivu Shibirada Kaipidi**


| | | |
|---|---|---|
| ಸಂಪಾದಕರು | : | **ಕಾ ತ ಚಿಕ್ಕಣ್ಣ** |
| ಪ್ರಕಾಶಕರು | : | **ವಿ.ಎನ್. ಮಲ್ಲಿಕಾರ್ಜುನ ಸ್ವಾಮಿ**<br>**ಸದಸ್ಯ–ಕಾರ್ಯದರ್ಶಿ**<br>**ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**<br>2ನೇ ಮಹಡಿ, ಚಾಲುಕ್ಯ ವಿಭಾಗ,<br>ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು<br>ದೂರವಾಣಿ : 080 22113147<br>ಇಮೇಲ್: kanakaresearchcentre@gmail.com<br>www.saintpoetkanaka.in |
| ಪುಟಗಳು | : | 8+118 |
| ಪ್ರತಿಗಳು | : | 1000 |
| ಮೊದಲ ಮುದ್ರಣ | : | 2015 |
| ಹಕ್ಕುಗಳು | : | **ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ** |

**ಶಿಬಿರಾರ್ಥಿಗಳಿಗೆ ಉಚಿತ ಹಂಚಿಕೆ**

| | | |
|---|---|---|
| ರಕ್ಷಾಪುಟದ ಕಲಾವಿದರು | : | ಮಹೇಶ್ ರಾವಲ್ |
| ಡಿಟಿಪಿ ಮತ್ತು ಮುದ್ರಣ | : | **ಎಂ.ಎಸ್. ಗ್ರಾಫಿಕ್ಸ್**<br>ಬೆಂಗಳೂರು |




# ಮುನ್ನುಡಿ

ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ಕನಕದಾಸರ ಜೀವನ ಮತ್ತು ಸಾಹಿತ್ಯ ಕುರಿತ ಅಧ್ಯಯನ, ಅವುಗಳ ಪ್ರಕಟಣೆ ಮತ್ತು ಪ್ರಸಾರ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ವಿವಿಧ ಮಾಧ್ಯಮಗಳಲ್ಲಿ ಕನಕದಾಸರ ತತ್ವಾದರ್ಶಗಳ ಪ್ರದರ್ಶನ–ಪ್ರಸಾರ ಮಾಡುವುದು. ವಿವಿಧ ಭಾಷೆಗಳಿಗೆ ಕನಕದಾಸರ ಸಮಗ್ರ ಸಾಹಿತ್ಯ ಅನುವಾದ ಮಾಡಿಸುವುದು. ಕರ್ನಾಟಕ ತತ್ವಪದಕಾರರ ಸಮಗ್ರ ಸಾಹಿತ್ಯವನ್ನು ಪ್ರಕಟಿಸುವುದು. ಯುವಜನ–ವಿದ್ಯಾರ್ಥಿ ಸಮುದಾಯಕ್ಕಾಗಿ ಕನಕ ಸಂಸ್ಕೃತಿ ಕಮ್ಮಟ, ರಸಗ್ರಹಣ ಶಿಬಿರಗಳ ಸಂಘಟನೆ ಮಾಡುವುದು ಹಾಗೂ ಹಿರಿಯ ಮತ್ತು ಯುವ ವಿದ್ವಾಂಸರಿಗೆ ಸಂಶೋಧನೆಗೆ ನೆರವು ನೀಡುವುದು ಮುಂತಾದ ಹಲವಾರು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದೆ.

ಪ್ರಸ್ತುತ, ಈ ಬಗೆಯ ಕಾರ್ಯಾಧ್ಯಯನಗಳಿಗೆ ಯುವ ಸಮುದಾಯವನ್ನು ತೊಡಗಿಸಿಕೊಳ್ಳುವುದು ಪ್ರಮುಖ ಆಶಯವಾಗಿದೆ. ಅಧ್ಯಯನ ಕೇಂದ್ರವು "ಕನಕ ಓದು" ಎಂಬ ಅರಿವಿನ ಶಿಬಿರವನ್ನು ಏರ್ಪಡಿಸುತ್ತಿದೆ. ಯುವ ಸಮುದಾಯವು ಕನಕದಾಸರನ್ನು ಹೊಸದೇ ರೀತಿಯಲ್ಲಿ ಓದಿ ಅರ್ಥೈಸಿಕೊಳ್ಳುವ ಹೊಸ ಆಲೋಚನೆಗಳಿಗೆ ತಮ್ಮನ್ನು ಒಡ್ಡಿಕೊಳ್ಳುವ ಆಶಯದಿಂದ ಈ ಕಾರ್ಯಕ್ರಮ ರೂಪುಗೊಂಡಿದ್ದು ಈ ಶಿಬಿರಕ್ಕೆ ಒಂದು ಸ್ಥೂಲ ಪರಿಚಯಾತ್ಮಕ ಕೈಪಿಡಿಯನ್ನು ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಕೈಪಿಡಿಯಲ್ಲಿ ಕನಕದಾಸರ ನಾಲ್ಕು ಕೃತಿಗಳು ಮತ್ತು ಕೀರ್ತನೆಗಳ ಆಯ್ದ ಭಾಗಗಳನ್ನು ಹಾಗೂ ಕನಕದಾಸರನ್ನು ಸ್ಥೂಲವಾಗಿ ಪರಿಚಯಿಸುವಂಥ ಆಯ್ದ ಲೇಖನಗಳನ್ನು ಸೇರಿಸಿ ಅಧ್ಯಯನ ಕೇಂದ್ರದ ಸಮನ್ವಯ ಅಧಿಕಾರಿಗಳಾದ ಕಾ ತಾ ಚಿಕ್ಕಣ್ಣ ಅವರು "ಕನಕ ಓದು" ಎಂಬ ಕೈಪಿಡಿಯನ್ನು ಸಂಪಾದಿಸಿಕೊಟ್ಟಿದ್ದಾರೆ. ಅವರಿಗೆ ಹಾಗೂ ಅಧ್ಯಯನ ಕೇಂದ್ರದ ಎಲ್ಲಾ ಸದಸ್ಯರಿಗೆ ನನ್ನ ನೆನಕೆಗಳು ಸಲ್ಲುತ್ತವೆ. ಈ ಕೈಪಿಡಿಯು ಶಿಬಿರಾರ್ಥಿಗಳಿಗೆ ಅನುಕೂಲವಾಗುವುದೆಂದು ನಿರೀಕ್ಷಿಸುತ್ತೇನೆ. ಓದುಗರು ಸಹೃದಯದಿಂದ ಈ ಕೃತಿಯನ್ನು ಸ್ವೀಕರಿಸುತ್ತಾರೆಂದು ಭಾವಿಸಿದ್ದೇನೆ.

**ಕೆ.ಎ.ದಯಾನಂದ**
ಅಧ್ಯಕ್ಷರು

# ಕನಕ ಓದು

ಪ್ರಸ್ತುತ ದಿನಮಾನದ ಕಣ್ಣಿನಲ್ಲಿ ನೋಡಿದರೆ ಕನಕದಾಸರು ಹಲವು ದಿಕ್ಕುಗಳಲ್ಲಿ ಮಾತನಾಡುತ್ತಿರುವಂತೆ ಕಾಣುತ್ತಿದ್ದಾರೆ. ದಿಟವಾದ ದಾರ್ಶನಿಕ ಕವಿ ವ್ಯಕ್ತಗೊಳ್ಳುವುದೇ ಹೀಗೆ. ಅವರು ಹೇಳಿರುವ ಬದುಕು–ಭವ–ಬವಣೆಗಳ ವಿಚಾರಗಳು ಅವು ನಾವೀಗ ಅನುಭವಿಸುತ್ತಿರುವವೇ ಆಗಿವೆ ಅನಿಸುವುದರಿಂದ ಅವು ಪ್ರಸ್ತುತವಾಗಿವೆ. ಏಕೆಂದರೆ ಅವು ವರ್ತಮಾನದ ಕಾವಿನಲ್ಲಿ; ಪರಿಸರದ ಪ್ರಭಾವದಲ್ಲಿ; ನಂಬಿಕೆ–ತತ್ವಗಳ ಮೀಮಾಂಸೆಯಲ್ಲಿ ಚಲನಶೀಲವಾಗಿರುತ್ತವೆ. ಹೀಗಾಗಿ ಆ ಕವಿ ದಾರ್ಶನಿಕರು ಜನರ ಮನಸಿನ ನಡುವೆ ಜೀವಂತವಾಗಿ ಮಾತನಾಡುತ್ತಿರುತ್ತಾರೆ. ಕನಕದಾಸರು ಇಂಥವರಾದ್ದರಿಂದ ಅವರ ಜೀವನಮೀಮಾಂಸೆಯ ಮಾತುಗಳ ಜಾಡನ್ನು ಹಿಡಿಯಬೇಕಾದರೆ ಕನಕರನ್ನು ಓದುವ ಮಾರ್ಗವನ್ನು ವರ್ತಮಾನಕ್ಕೆ ಜೋಡಿಸಿಕೊಳ್ಳಬೇಕು. ಏಕೆಂದರೆ ಅವರು ಜಾತಿಯ ಬಗ್ಗೆ ಮಾತನಾಡುತ್ತಾರೆ, ಧರ್ಮದ ಬಗ್ಗೆ ಮಾತನಾಡುತ್ತಾರೆ, ಭಕ್ತಿ–ಮೋಕ್ಷಗಳ ಬಗ್ಗೆ ಮಾತನಾಡುತ್ತಾರೆ, ಮನುಷ್ಯನ ಹಲವು ಭಾವ ಭಂಗಿಗಳ ಬಗ್ಗೆ, ಅವನ ಒಳಮನಸಿನ ಬೇರೊಂದು ರೂಪದ ಬಗ್ಗೆ, ಅಲ್ಪಸಂಖ್ಯಾತ ಮೇಲ್ವರ್ಗದ ಪ್ರಾಬಲ್ಯದ ಬಗ್ಗೆ, ಬಹುಸಂಖ್ಯಾತ ತಳಸಮುದಾಯದ ಅಸಹಾಯಕತೆ ಆತ್ಮಾಭಿಮಾನದ ಬಗ್ಗೆ, ಪ್ರತಿಷ್ಠಿತ ಶಕ್ತಿಗಳ ಹಿತಸಾಧನೆಯ ನಡೆಯಲ್ಲಿ ನಲುಗುವ ಕ್ರಿಯಾಶೀಲತೆಯ ಬಗ್ಗೆ, ಭಾಷೆಯ ಬಗ್ಗೆ, ಕನ್ನಡ ಜನಪದ ಬದುಕಿನ ವಿವೇಕದ ಬಗ್ಗೆ – ಹೀಗೆ. ಆದ್ದರಿಂದ ಅವರ ಕಾವ್ಯದರ್ಶನ, ಜೀವನ ಸಂದೇಶ, ಸಮಾಜಮುಖಿ ಚಿಂತನೆ, ಅಧ್ಯಾತ್ಮಿಕ ಆಲೋಚನೆಗಳನ್ನು ಭಿನ್ನ ಭಿನ್ನ ನೆಲೆಯಲ್ಲಿ ಪುನರಾವಲೋಕನಕ್ಕೆ ಒಡ್ಡಿಕೊಳ್ಳಬೇಕಾಗಿದೆ.

ಈ ಆಶಯದಿಂದ ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವು ತನ್ನ ಕಾರ್ಯಕ್ರಮಗಳಾದ ಅಧ್ಯಯನ, ಸಂಶೋಧನೆ, ಸಂಸ್ಕೃತಿ ಕಮ್ಮಟ, ರಸಗ್ರಹಣ ಶಿಬಿರ, ದಾಸ–ಸಂತರ ತೌಲನಿಕ ಅಭ್ಯಾಸ, ಪ್ರಕಟಣೆ–ಪ್ರಸಾರ ಮುಂತಾದವುಗಳ ಜೊತೆಗೆ ಪ್ರಸಕ್ತ "ಕನಕ ಓದು" ಎಂಬ ಕನಕ ಅರಿವು ಶಿಬಿರವನ್ನು ಸಂಘಟಿಸಲು ಕಾರ್ಯಪ್ರವೃತ್ತವಾಗಿದೆ. ವಿಶೇಷವಾಗಿ ಈ ಯುಗಮಾನದ ತಲ್ಲಣ ತವಕಗಳಿಗೆ ಯುವ ಸಮುದಾಯ ಸಿಲುಕಿರುವುದು ವಾಸ್ತವವೇ. ಈ ವಾಸ್ತವಕ್ಕೆ "ಕನಕತ್ವ" ವನ್ನು ಇಟ್ಟು ಮುಖಾಮುಖಿಯಾಗಿಸಬೇಕು ಎಂಬುವುದು ಈ ಶಿಬಿರದ ಉದ್ದೇಶ.

ಹಿಂದೆ ಪ್ರಸ್ತಾಪಿಸಿದಂತೆ, ಕನಕದಾಸರನ್ನು ಓದುವ ಹೊಸ ತಲೆಮಾರಿನ ಜನರು, ಯುವಕ–ಯುವತಿಯರು, ವಿದ್ಯಾರ್ಥಿಗಳು ಸಂತಕವಿಯನ್ನು ಹೊಸದೇ ರೀತಿಯಲ್ಲಿ ಓದಬೇಕಾಗುತ್ತದೆ. ಈ ಯುವಸಮುದಾಯಕ್ಕೆ ಹೊಸದೇ ರೀತಿಯಲ್ಲಿ ಓದಿಕೊಳ್ಳುವಂತೆ



ಹೇಳಿಕೊಡಬೇಕಾಗುತ್ತದೆ. ಇಲ್ಲವಾದರೆ ನಡೆದಂತೆಯೇ ನಡೆದರೆ ಹಿಂದೆ ಆಗಿರುವ ಅಭ್ಯಾಸ, ಅಧ್ಯಯನಗಳನ್ನು ಮರು ಹೇಳಿದಂತಾಗುತ್ತದೆಯೆ ಹೊರತು ಕನಕದಾಸರನ್ನು ವಿಸ್ತರಿಸಿದಂತಾಗುವುದಿಲ್ಲ; ಇದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಆದುದರಿಂದ ಬಹು ಪ್ರಧಾನವಾಗಿ ಕನಕದಾಸರಲ್ಲಿ ಇರುವ ಚಿಂತನೆಗಳನ್ನು ವಿಮರ್ಶಾತ್ಮಕವಾಗಿ ವಿವೇಚಿಸುತ್ತಲೇ ಅಲ್ಲಿರುವ ಜಾತ್ಯತೀತ ಮೌಲ್ಯಗಳನ್ನು ಮತ್ತು ಜೀವಕುಲದೊಳಗಿನ ಹೊಕ್ಕಳುಬಳ್ಳಿ ಸ್ವರೂಪಿ ಸಹಿಷ್ಣುತೆಯನ್ನು ಹೀರಿಕೊಳ್ಳುವ ಬಗೆಯನ್ನು ತೋರಿಸಿಕೊಡಬೇಕಾಗುತ್ತದೆ.

ಈ ಆಲೋಚನೆಯಿಂದ ಯುವಜನರಿಗಾಗಿ, ವಿದ್ಯಾರ್ಥಿಗಳಿಗಾಗಿ ಏರ್ಪಡಿಸುವ "ಕನಕ ಓದು" ಎಂಬ ಅರಿವಿನ ಶಿಬಿರಕ್ಕಾಗಿ ಈ ಕೈಪಿಡಿಯನ್ನು ಸಿದ್ಧಪಡಿಸಲಾಗಿದೆ. ಶಿಬಿರವು ಸಿದ್ಧಮಾದರಿಯ ಮಾತು, ಆ ಮಾತುಮೇಲಣ ಸಂವಾದ, ಆ ಸಂವಾದಕ್ಕಾಗಿ ಹೆಣೆದ ಪ್ರಶ್ನೋತ್ತರ ರೀತಿಗಳಲ್ಲಿ ಮುಗಿಯದೆ ಈ ಕೈಪಿಡಿಯನ್ನು ಓದಿಕೊಂಡು ಬರುವಂತೆ ಶಿಬಿರಾರ್ಥಿಗಳಿಗೆ ಮೊದಲೇ ಒದಗಿಸಿ, ತರುವಾಯ ಶಿಬಿರ ಸಂಘಟಿಸಿ, ಕನಕರ ಕಾವ್ಯಭಾಗಗಳನ್ನು ಓದುವುದಕ್ಕೆ, ಓದುವುದನ್ನು ಗ್ರಹಿಸುವುದಕ್ಕೆ, ಗ್ರಹಿಸಿದ್ದನ್ನು ವ್ಯಾಖ್ಯಾನಿಸಿಕೊಳ್ಳುವುದಕ್ಕೆ ಇಲ್ಲಿ ಸಾಧ್ಯಮಾಡಿಕೊಳ್ಳಲಾಗಿದೆ. ಈ ಬಗೆಯಲ್ಲಿ ಕನಕ ಓದುವಿನ ಆಲಯದೊಳಗೆ ಶಿಬಿರಾರ್ಥಿಗಳನ್ನು ತೊಡಗಿಸಿ ಬಯಲುಗೊಳಿಸುವ ಪ್ರಯತ್ನ ಇದಾಗಿದೆ.

ಇಷ್ಟಾಗಿಯೂ ಈ ಕೈಪಿಡಿಯು ಅರಿವು ಶಿಬಿರದ ವೇದಿಕೆಯ ಪಠ್ಯವೇನಲ್ಲ. ಇದೊಂದು ಸಾಂಕೇತಿಕ ತೋರ್ಬೆರಳಷ್ಟೆ. ಕನಕರನ್ನು ಓದಿ ಅರ್ಥೈಸಿಕೊಳ್ಳಲು ಬಯಸುವ ಆಸಕ್ತರೆಲ್ಲರಿಗೂ ಇದು ಉಪಯುಕ್ತವಾಗಬಹುದೆಂಬ ನಿರೀಕ್ಷೆಯೂ ಇದೆ.

ಇಂಥ ಶಿಬಿರವನ್ನು ಆಯೋಜಿಸಲು ಮತ್ತು ಅದರ ನೆಪದಲ್ಲಿ ಪೂರಕ ಸಹಾಯಕ ಕೈಪಿಡಿಯನ್ನು ಸಿದ್ಧಪಡಿಸಲು ಒಪ್ಪಿಗೆ ಸೂಚಿಸಿದ ಅಧ್ಯಯನ ಕೇಂದ್ರದ ಅಧ್ಯಕ್ಷರಾದ ಶ್ರೀ ಕೆ.ಎ.ದಯಾನಂದ, ಸದಸ್ಯ ಕಾರ್ಯದರ್ಶಿಗಳಾದ ಶ್ರೀ ವಿ.ಎನ್.ಮಲ್ಲಿಕಾರ್ಜುನ ಸ್ವಾಮಿ, ಅಧ್ಯಯನ ಕೇಂದ್ರದ ಕಾರ್ಯಾನುಷ್ಠಾನ ಮಂಡಳಿ ಸದಸ್ಯರಿಗೆ, ಮುಖ್ಯವಾಗಿ ಈ ಶಿಬಿರದ ಕಲ್ಪನೆಗೆ ಚಾಲನೆ ನೀಡಿದ ಡಾ. ಹಿ.ಶಿ.ರಾಮಚಂದ್ರೇಗೌಡರಿಗೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಈ ಕೈಪಿಡಿಗೆ ಪಠ್ಯಭಾಗಗಳನ್ನು ಆಯ್ದುಕೊಟ್ಟ ಪ್ರೊ. ಜ್ಯೋತಿಹೊಸೂರ, ಡಾ. ರಂಗನಾಥ ಕಂಟನಕುಂಟೆ, ಡಾ. ಸುರೇಶ ನಾಗಲಮಡಿಕೆ, ಡಾ. ಕಬ್ಬಿನಾಲೆ ವಸಂತಭಾರದ್ವಾಜ್ ಹಾಗೂ ತಮ್ಮ ಲೇಖನಗಳನ್ನು ಬಳಸಿಕೊಳ್ಳಲು ಅನುಮತಿಸಿದ ಡಾ. ಹಿ.ಶಿ.ರಾಮಚಂದ್ರೇಗೌಡ, ಡಾ. ಕುಂಸಿಉಮೇಶ, ಡಾ. ಬಂಜಗೆರೆ ಜಯಪ್ರಕಾಶ, ಡಾ. ಸಬಿತಾ ಬನ್ನಾಡಿ ಇವರಿಗೆ ಕೃತಜ್ಞತೆಗಳು. ರಕ್ಷಾಪುಟದ ಕಲಾವಿದರಾದ ಶ್ರೀ ಮಹೇಶ್ ರಾವಲ್ ಹಾಗೂ ಈ ಕೈಪಿಡಿಯನ್ನು ಮುದ್ರಿಸಿಕೊಟ್ಟ ಎಂ.ಎಸ್. ಗ್ರಾಫಿಕ್ಸ್ ಇವರಿಗೂ ವಂದನೆಗಳು ಸಲ್ಲುತ್ತವೆ.

**ಕಾ ತ ಚಿಕ್ಕಣ್ಣ**

ಸಂಪಾದಕ

# ಪರಿವಿಡಿ

# ಮೋಹನ ತರಂಗಿಣಿ

ಮೋಹನ ತರಂಗಿಣಿಯು ಕನ್ನಡದ ಮೂಲಸತ್ತ್ವದ ಛಂದಸ್ಸೆಂದು ಪರಿಗಣಿಸಲಾಗಿರುವ ಸಾಂಗತ್ಯ ಛಂದಸ್ಸಿನಲ್ಲಿ ರಚನೆಗೊಂಡಿರುವ ಕಾವ್ಯ. ೪೨ ಸಂಧಿಗಳಲ್ಲಿ ವಿಂಗಡನೆಗೊಂಡಿರುವ ಇದು, ೨೭೭೯ ಹಾಡುವ ಪದ್ಯಗಳನ್ನೊಳಗೊಂಡಿದೆ. ಹೀಗಾಗಿ ಇದೊಂದು ಹಾಡುಗಬ್ಬ.

**ಕಾವ್ಯ ಹಿನ್ನೆಲೆ:**

ಮೋಹನ ತರಂಗಿಣಿ ಕಾವ್ಯದ ಹಂದರವು ಸಂಸ್ಕೃತದಲ್ಲಿಯ ಮಹಾಭಾರತ, ಭಾಗವತ, ಸ್ಕಂಧಪುರಾಣ, ವಿಷ್ಣುಪುರಾಣ, ಹರಿವಂಶ ಮುಂತಾದವುಗಳನ್ನು ಆಧರಿಸಿದೆ. ಆದರೆ ಅದಕ್ಕೆ ಕವಿ ತನ್ನ ಸ್ವಂತಿಕೆಯ ಮುದ್ರೆಯೊತ್ತಿ 'ಮೋಹನ ತರಂಗಿಣಿ'ಯಾಗಿ ಸೃಷ್ಟಿಸಿದ್ದಾನೆ. ಕವಿ ಇದನ್ನು ಕೃಷ್ಣಚರಿತೆ ಎಂದು ಕರೆದುಕೊಂಡಿದ್ದರೂ ಪ್ರಧಾನವಾಗಿ ಇದೊಂದು ಶೃಂಗಾರ ಕಾವ್ಯ. ಅಲ್ಲದೆ ಶ್ರೀಕೃಷ್ಣನನ್ನು ವಿಜಯನಗರ ಸಾಮ್ರಾಟ ಶ್ರೀಕೃಷ್ಣದೇವರಾಯನೊಂದಿಗೆ ಸಮೀಕರಣಗೊಳಿಸಿ ಸಮಕಾಲೀನತೆಯ ದಟ್ಟ ಅನುಭವಗಳನ್ನು ಒದಗಿಸಿಕೊಟ್ಟಿದ್ದಾನೆ.

ಆಕರ್ಷಕ ಪೌರಾಣಿಕ ಕಥಾವಸ್ತು, ಮಾನವಸಹಜ ಪಾತ್ರಗಳ ಸೃಷ್ಟಿ, 'ನಾಡೊಳಗುಳ್ಳ ಜಾಣರು ಜಾಣೆಯರೊಡನಾಡುವ ಸವಿಮಾತ'ನ್ನು ಒಳಗೊಂಡ ಭಾಷೆ, ಚಾತುರ್ಯಯುಕ್ತ ವರ್ಣನೆ ಇತ್ಯಾದಿಗಳಿಂದಾಗಿ ಈ ಕಾವ್ಯ ಮನಮೋಹಕವಾಗಿದೆ. ಮನಸ್ಸನ್ನು ಸೆಳೆದು ಮೋಹಗೊಳಿಸುವ ಹೊಳೆ ಎಂಬರ್ಥವುಳ್ಳ 'ಮೋಹನ ತರಂಗಿಣಿ' ಕಾವ್ಯನಾಮ ಅರ್ಥಪೂರ್ಣವಾಗಿದೆ.

'ಮೋಹನ ತರಂಗಿಣಿ' ಕಾವ್ಯದಲ್ಲಿ ಪ್ರಾಮುಖ್ಯವಾಗಿ ಕೃಷ್ಣ–ರುಕ್ಮಿಣಿ, ಪ್ರದ್ಯುಮ್ನ–ರತಿ, ಅನಿರುದ್ಧ–ಉಷಾ ಈ ಜೋಡಿಗಳ ಪ್ರಣಯ ಜೀವನ ಚಿತ್ರಿಸುವಾಗ ಶೃಂಗಾರ ರಸ ಉಕ್ಕೇರುತ್ತದೆ. ಮೇಲಾಗಿ, ರಸಿಕರಾಜನೆನ್ನಿಸಿಕೊಂಡಿರುವ ಕೃಷ್ಣನದೇ ಈ ಕಾವ್ಯದಲ್ಲಿ ಕೇಂದ್ರ ಪಾತ್ರವೂ ಆಗಿದೆ.

ಕಥಾ ನಿರೂಪಣೆಗೆ ಕವಿ ಸಂಭಾಷಣಾ ತಂತ್ರ ಅಳವಡಿಸಿಕೊಂಡಿದ್ದಾನೆ. ಸುಜ್ಞಾನವಧೂಟಿಯೆಂಬವಳೊಬ್ಬಳು 'ಮೋಹನ ತರಂಗಿಣಿ'ಯನ್ನು ಕೇಳುತ್ತಾಳೆ; ಕವಿ ಹೇಳುತ್ತಾನೆ. ಮೊದಲ ಸಂಧಿಯಲ್ಲಿ ಸಂಭಾಷಣ ರೂಪದ ಐದಾರು ಪದ್ಯಗಳಿವೆ.

ಅನಂತರ ಪ್ರತಿಸಂಧಿಯ ಮೊದಲಿಗೆ ಇವರಿಬ್ಬರ ಸರಸ ಸಂಭಾಷಣೆಯ ಎರಡು ಪದ್ಯಗಳೊಂದಿಗೆ ಕಾವ್ಯಕಥೆ ಮುಂದುವರಿಯುತ್ತದೆ.

ಕವಿ ಕನಕದಾಸರು 'ಮೋಹನ ತರಂಗಿಣಿ'ಯಲ್ಲಿ ಮಹಾಕಾವ್ಯದ ಅತ್ಯಗತ್ಯ ಲಕ್ಷಣಗಳಾಗಿರುವ ಅಷ್ಟಾದಶ ವರ್ಣನೆಗಳನ್ನೆಲ್ಲ ಕಾಳಜಿಯಿಂದ ಅಳವಡಿಸಿದ್ದಾರೆ. ಶಬ್ದಾಲಂಕಾರ, ಅರ್ಥಾಲಂಕಾರಗಳೂ ಇಲ್ಲಿ ಸ್ಥಾನ ಪಡೆದಿವೆ. 'ನಾಲ್ವಗೆ ಪುರುಷಾರ್ಥ ಸಾಧನೆ' ಈ ಕಾವ್ಯದ ಉದ್ದೇಶವೆಂದೂ ಹೇಳಲಾಗಿದೆ. ಹೀಗೆ ಇದು ಮಹಾಕಾವ್ಯದ ಲಕ್ಷಣಗಳನ್ನೆಲ್ಲ ಒಳಗೊಂಡಿದೆ. ಮಹಾಕಾವ್ಯದ ಲಕ್ಷಣಗಳಲ್ಲೊಂದಾದ ವಿವಿಧ ವೃತ್ತಗಳಲ್ಲಿ ಕಾವ್ಯವಿರಬೇಕೆಂಬುದು ಮಾತ್ರ ಇಲ್ಲಿ ಸಾಧ್ಯವಾಗಿಲ್ಲ. ಇದೊಂದನ್ನು ಹೊರತುಪಡಿಸಿ, ಮಹಾಕಾವ್ಯದ ಎಲ್ಲ ಪ್ರಮುಖ ಲಕ್ಷಣಗಳನ್ನೂ ಈ ಕಾವ್ಯ ಹೊಂದಿದೆ. ಆದ್ದರಿಂದ ಕವಿಯು ಮಹಾಕಾವ್ಯವಾಗಿಸಬೇಕೆಂಬ ಹಿರಿಯಾಸೆಯಿಂದಲೇ 'ಮೋಹನ ತರಂಗಿಣಿ' ರಚಿಸಿದ್ದಾರೆನ್ನಬಹುದಾಗಿದೆ.

ಪ್ರಸ್ತುತ ಕಾವ್ಯದ ಕಥೆಯು ಕೃಷ್ಣ–ರುಕ್ಮಿಣಿಯರ ವಿವಾಹೋತ್ತರ ಪ್ರಣಯ ಶೃಂಗಾರ ಜೀವನದಿಂದ ಮೊದಲಾಗುತ್ತದೆ; ಪ್ರದ್ಯುಮ್ನ–ರತಿಯರ ಶೃಂಗಾರ ಜೀವನ ಮತ್ತು ವಿವಿಧ ಹಂತಗಳಲ್ಲಿ ಅದು ಅವಸ್ಥಾಂತರಗೊಂಡು ವಿಸ್ತಾರವಾಗಿ ಮುಂದುವರಿಯುತ್ತದೆ; ಮತ್ತು ಅನಿರುದ್ಧ–ಉಷೆಯರ ಪ್ರಣಯ ಶೃಂಗಾರದ ವರ್ಣನೆಯು ಸಾರ್ಥಕತೆಯ ಸಂದೇಶದ ಸಮ್ಮಿಳನದೊಂದಿಗೆ ಧನ್ಯತೆಯನ್ನು ಪಡೆಯುತ್ತದೆ. ಹೀಗಾಗಿ ಸಾಮರಸ್ಯದ ಸಂದೇಶ ಬೀರುವ ಮಹತ್ತ್ವದ ಕಾವ್ಯವಾಗಿ 'ಮೋಹನ ತರಂಗಿಣಿ' ಅಭ್ಯಾಸನೀಯವಾಗಿದೆ.

**ಕಾವ್ಯ ಪಠ್ಯದ ಆಯ್ದ ಭಾಗ:**

**ಟಿಪ್ಪಣಿ: ಕೃತಿ ರಚನೆ ಬಗೆಗಿನ ಕವಿಕನಕದಾಸರು ಆರಂಭದಲ್ಲಿ ಇಷ್ಟದೈವ ಹಾಗೂ ತನ್ನ ಪೂಜ್ಯರನ್ನು ನೆನೆಯುತ್ತ ಸುಜ್ಞಾನ ವಧೂಟಿಗೆ ಕಥೆ ಹೇಳುವ ರೀತಿ ನಾವಿನ್ಯದಿಂದ ಕೂಡಿದೆ –**

ಶ್ರೀ ಗಿರಿಜೇಶ್ವರನಾತ್ಮಾಭಿರಾಮ ಸ
ದ್ವಾಗೀಶ ಪಿತ ಪರಂಧಾಮ
ಕಾಗಿನೆಲೆಯ ರಂಗ ಸುರಸಾರ್ವಭೌಮ ಸು
ತ್ಯಾಗಿ ಪಾಲಿಸು ಪೂರ್ಣಕಾಮ ॥

ಶ್ರೀ ಮದ್ಗುರು ರಾಯ ದುರಿತವಿಜೇಯ ದು
ಷ್ಕಾಮ ವಿಚ್ಛೇದನಾಹ್ಲಾದ



ತಾಮಸಗುಣ ನಾಶ ಸಾತ್ವಿಕೋಲ್ಲಾಸ ಶ್ರೀ
ರಾಮಾನುಜ ಮುನಿ ಶರಣು ॥

ಈ ರೀತಿಯ ಪೆಂಪುವಡೆದ ಸದ್ಗುರು ಕರ
ವಾರಿಜೋದ್ಭವ ಶಿಷ್ಯ ಜನರ
ಪ್ರೇರಿಸಿ ಚತುರ್ವಿಧ ಫಲವೀವ ತಾತಾ
ಚಾರಿಯರಡಿಗೆ ಎರಗುವೆನು ॥

ನಿಮ್ಮಯ ಪಿತ ಕೃಷ್ಣರಾಯನ ಮಹಿಮೆಯನು
ಹಮ್ಮನರಿದು ಕೀರ್ತಿಪೊಡೆ
ನಮ್ಮಳವಲ್ಲ ಶಾರದೆಗೂಡಿ ಚತುರಾಸ್ಯ
ಬೊಮ್ಮ ಬಾಯೆನ್ನೆದೆವನೆಗೆ ॥

ಪೂಸರ ದಹನ ಕಾಮೋತ್ಪತ್ತಿ ವರ ಶಂಬ
ರಾಸುರವಧೆ ಕಂತು ಸುತನ
ಭಾಸುರ ಲೀಲೆ ಬಾಣನ ಗೆದ್ದ ಜಯ ಲ
ಕ್ಷ್ಮೀಶನ ಕೃತಿಯ ವರ್ಣಿಪೆನು ॥

ನಾಡೊಳಗುಳ್ಳ ಜಾಣರು ಜಾಣೆಯರೊಡನೆ
ಆಡುವ ಸವಿವಾತುಗಳ
ಪಾಡುಗಬ್ಬವ ಪರುಠವಿಸಿದ ಬಗೆಯ ನೀ
ನೋಡು ಮಾನಿನಿ ಮುಂದೆ ಮುಂದೆ ॥

ಕೃತಿವೇಳ್ದವ ಕನಕದಾಸೋತ್ತಮ ಕೇಳ್ದವ
ಳ್ಸತಿ ಸುಜ್ಞಾನ ವಧೂಟಿ
ಕೃತಿಗೆ ಕರ್ತನು ಕಾಗಿನೆಲೆಯಾದಿಕೇಶವ
ಕೃತಿಯ ಕೇಳ್ದರೆ ಪುಣ್ಯವಹುದು ॥

**ಟಿಪ್ಪಣಿ: ಕಾವ್ಯದಲ್ಲಿ ಪುರವರ್ಣನೆ –**

ಜಲಗೈಯ ಶರಭ ಶಾರ್ದೂಲ ಕಂಠೀರವ
ನೆಲಜೇಷ್ಠ ನಹುಸಿಯ ಭೂತ

ಕೆಲ ಮೃಗ ಪಕ್ಷಿಯಿಂದೆಸೆದಿತ್ತು ರೈವತಾ
ಚಲ ದ್ವಾರಕಿಯ ಬಾಹ್ಯದಲಿ ॥

ಮಗಳ ಗಂಡನ ಕೂಡೆ ಮಹದಾದಿ ದೈತ್ಯರು
ಜಗಳಕೆ ಬಪ್ಪರೆಂದೆನುತ
ನೆಗಳಾನೆ ಮೀನ್ಗಳನೊಳಗೊಂಡು ಬಂದು ಪೇ
ರಗಳಾದುದಬ್ಧಿ ದ್ವಾರಕೆಗೆ ॥

ಸುತ್ತಣ ಮಣಿಗಲ್ಲ ಹೊಂಗೋಂಟೆ ನೋಡಲು
ತತ್ತಳಗೈವುವಕ್ಷಿಗಳು
ಕೊತ್ತಳ ನಿಚಯವು ಕೊಳದ ಪರಿಖೆಯರಿಗಳ
ಹೆತ್ತಳ ಗಂಡನಂತಿಹುದು ॥

ಮೊನೆಗಾರ ಖಳರ ಖಂಡಿಸಲೆಂದು ವಸುದೇವ
ತನಯ ಚಕ್ರಕೆ ವಿಶ್ವರೂಪ
ವಿನಯದಿ ಕೊಟ್ಟನೆಂಬಂದದಿ ಕೋಟೆಯ
ತೆನೆಗಳಿದ್ದುವು ಸುತ್ತ ಬಳಸಿ ॥

ದೇಶಾಧಿಪ ಕೃಷ್ಣರಾಯಂಗೆ ಖಳರಿಂದ
ಮೋಸವ ಬರಗೊಡೆನೆನ್ನುತ
ಶೇಷ ಮಂಡಳಿಸಿದಂದದಿ ವಜ್ರದಾಳ್ವೇರಿ
ಲೇಸಾದುದೇವಣ್ಣಿಸುವೆನು ॥

ಬಲಿನಂದನ ಮುಖ್ಯ ಖಳರೆಂಬ ಮೃಗಕುಲ
ಚಲಿಸಿ ತನ್ನಿದಿರ್ವರೆ ಪಿಡಿದು
ಛಲದಿ ಹೊಯ್ವೆನೆಂಬ ರೌದ್ರದಿಂ ಕೋಟೆಯ
ಹುಲಿಮೊಗ ಕಣ್ಗೆ ರಂಜಿಸಿತು ॥

ಮೀಟಾದ ರಮ್ಯರತ್ನಂಗಳ ಸೊನ್ನಾರ
ಮಾಟದ ಬಗೆಬಗೆ ಬಂಧಗಳ
ಕೂಟಸ್ಥವಾದ ಹೊನ್ನಗಸೆಯ ತಳಿತ ಕ
ವಾಟಗಳಿರ್ದುವೇನೆಂಬೆ ॥



ರಾಗರಸದೊಳನವರತ ಕಾದಲರ ಸಂ
ಭೋಗಕ್ಕೆ ಸಮವಾಗಲೆನುತ
ಆಗಮಜ್ಞರು ಹಂಚಿಕೊಟ್ಟಂತೆ ಪೋಡಿಯ
ಪೂಗದಂಗಡಿಗಳೊಪ್ಪಿದವು ॥

ಕಲೆಯರಿದಮಲ ಭಾವಜ್ಞರು ತಮ್ಮ ಕಾ
ದಲೆಯರ ಕರೆವ ಸನ್ನೆಯನು
ಸಲೆ ಪರಿಗ್ರಹಿಸಿ ಶೋಭಿಸುತಿರ್ಪ ಲಲಿತ ಬೆ
ಳ್ಳೆಲೆಯಂಗಡಿಗಳೊಪ್ಪಿದವು ॥

ಸಡಿಲಿದ ಮುಡಿ ಬೆಮರ್ವನಿಗಳು ತೀವಿ ತೊ
ಟ್ಟಿಡುವಾಸ್ಯ ಅಲುಗುವ ಕುಚದಿ
ಕಡು ಸೊಬಗಾಂತು ಗಂಧವ ಮಗುಳ್ಚುವ ಹೆಂಗ
ಳಡಸಿದಂಗಡಿಗಳೊಪ್ಪಿದುವು ॥

ಸುರಗಿ ಸೇವಂತಿಗೆ ಕುಂದ ಮಂದಾರ ಪಾ
ದರಿ ಕಂಚಿ ಕಣಗಿಲೆ ದವನ
ಬಿರಿದ ಕೆಂಜಾಜಿ ನಾನಾ ಪುಷ್ಪದಂಗಡಿ
ಪರುಠವಿಸಿರ್ದುದೇನೆಂಬೆ ॥

ಇಡಿಕಿರಿದಿಹ ಪುಷ್ಪದೊಳು ಗಂಧವಿರಲಾ
ರಡಿ ತುಡುಕುವುದೆಂದು ನೆಲದಿ
ನಿಡುವೇರಿನೊಳು ಪರಿಮಳವಾಂತು ರಂಜಿಪ
ಮುಡಿವಾಳವಸರವೊಪ್ಪಿದುವು ॥

**ಟಿಪ್ಪಣಿ: ಕಾವ್ಯದಲ್ಲಿ ಜಲಕ್ರೀಡೆಗಳ ವರ್ಣನೆ –**
ಮುರಹರನರ್ಧಾಂಗಿಯರ ಕೋಮಲವೆತ್ತ
ಚರಣಾಂಗುಲಿಯ ಭೂಷಣದ
ವರ ರತ್ನಗಳಿಂ ಅಡಿಯಿಡಲುದುರಿದ ಪುಡಿ
ಮೆರೆದುದು ಮಣಿದೀಪ್ತಿಯಂತೆ ॥

ಸಿರಿಹರಿಯ ರಾಣಿಯರ ಪಾದದ ಹೊನ್ನ
ಸರಪಳಿಯೆಳೆಯುತ್ತ ಬರಲು
ವರ ನೀಲ ನೆಲೆಗಟ್ಟಿನ ಮೇಲೆ ಪೊಂಬಳ್ಳಿ
ಗೆರೆಯ ಚಿತ್ರ ಮೂಡಿಸಿದವು ॥

ತುಂಟ ರಕ್ಕಸರ ಹಾಹೆಗಳ ಮಧ್ಯದ ಹೊನ್ನ
ಗಂಟೆಯ ನಾದವಂಘ್ರಿಯೊಳು
ವೆಂಟಣಿಸಲು ಕೃಷ್ಣ ನಡೆತಂದು ಕ್ರೀಡಾ
ಮಂಟಪವನು ಸಾರ್ದನೊಲಿದು ॥

ನೋಡಲು ಕಣ್ಗೆಸೆದುವು ಚಂದ್ರಕಾಂತದ
ಕ್ರೀಡಾಕೊಳಗಳಲ್ಲಲ್ಲಿ
ಜೋಡಣೆಗೆಯ್ದ ಸುವರ್ಣಮಂಟಪದ ಕೈ
ವಾಡವನೇನ ಬಣ್ಣಿಪೆನು ॥

ರತ್ನದ ಕೋಲ ಹೊನ್ನಂಡೆಗಳನಾಂತು
ಪುತ್ತಳಿ ಮದನಿಕೆ ಎಡೆಯಲಿ
ಚಿತ್ತರ ಬಿಡಿಸಿದ ಬಿನ್ನಾಣಗಳ ನೋಡಿ
ಚಿತ್ತೈಸಿದನು ಕೃಷ್ಣ ನಗುತ ॥

ಶಾಲೆಗಳಿಂದ ಕುಚ್ಚುಗಳಿಂದ ಕಮ್ಮಲ
ರ್ಮಾಲೆ ಝುಲ್ಲರಿ ಝುಲ್ಲಿಯಿಂದ
ಬಾಲೆಯರುಗಳ ಕಣ್ಮನಕೆ ರಾಟಣದು
ಯ್ಯಾಲೆ ನಾಲ್ದೆಸೆಯೊಳೊಪ್ಪಿದವು ॥

ಅವರವರು ತಮ್ಮತಮ್ಮ ಪ್ರಾಣಕಾಂತರ
ನಿವಹವೊಂದಾಗಿ ತತ್ಕೊಳದಿ
ಬೆವಹರಿಸಿದರಾಯತವೆತ್ತು ಧರಣೀ
ಧವನೋಕುಳಿಗೆ ನೇಮಿಸಿದ ॥



ನೀರೆಯರುಗಳಾಯತವೆತ್ತು ಬರಲಾಗಿ
ಬೇರೆಬೇರೆ ಅವರುಗಳ
ಮೋರೆಯ ಸೊಬಗನೀಕ್ಷಿಸುತ ಕೃಷ್ಣನ ಮನ
ಸೂರೆ ಹೋಗದೆ ಸುಮ್ಮನಿಹುದೆ ॥

ನೀರನು ಬಿಟ್ಟೇನಿರಬಹುದೆ ಮತ್ಸ್ಯಾವ
ತಾರಿ ನೀನೆಂದು ನೀರೆಯರು
ರಾರಾಜಿಸುತಿಪ್ಪ ಕುಂಕುಮ ಜಲದಲ್ಲಿ
ನಾರಾಯಣನನದ್ದಿದರು ॥

ನಮ್ಮೊಳು ನಾವೇಕೆ ಪೊಯ್ದಾಡಬೇಕೆಂದು
ಕಮ್ಮಲರ್ಗಂಧಗಂಧಿಯರು
ತಮ್ಮನಾಳುವ ಕೃಷ್ಣರಾಯನ ತುಡುಕಿದ
ಹೆಮ್ಮೆಯನೇನ ಬಣ್ಣಿಪೆನು ॥

ನಿಜಲೀಲೆಯೊಳಗಿರೆ ಶ್ರೀಕೃಷ್ಣರಾಯನ
ಭಜಕ ನಿಷ್ಠರುಗಳು ತಮ್ಮ
ಗಜಗಮನೆಯರೊಂದುಗೂಡಿ ಕ್ರೀಡಾಕೊಳ
ವ್ರಜದೊಳೋಕುಳಿಯಾಡಿದರು ॥

ಎಡಬಲದೊಳು ಪಿಂತೆಮುಂತೆ ಶೋಭಿಪ ಪೊಂ
ಗೊಡಮೊಲೆಯವರೋಕುಳಿಯ
ಎಡೆವಿಡದೊಬ್ಬರೊಬ್ಬರ ಮೇಲೆ ಚೆಲ್ಲುವ
ಸಡಗರವೇನ ಪೇಳುವೆನು ॥

ಉಡು ವಸನಂಗಳು ತೊಯ್ದು ಪೊಂಬಣ್ಣಕಿ
ಮ್ಮಡಿ ರುಚಿದೋರುತಿರಲು
ಕುಡಿತೆಗಣ್ಣಬಲೆಯರುಗಳು ತಣ್ಣಸವೆತ್ತು
ನಡುಗಿದರು ಮೊಲೆ ನರ್ತಿಸಲು ॥

ವೇಡೆಯವಡೆದು ನಿಂದುದು ಹೆಣ್ಣು ಹರಿ ಜಲ
ಕ್ರೀಡೆಯನಾಡಿದನಂತರ
ಕೂಡೆ ಸದ್ವಸ್ತ್ರಭೂಷಣ ಗಂದಮಾಲ್ಯವ
ಜೋಡಣೆಗೆಯ್ದನೆಲ್ಲರಿಗೆ ॥

**ಟಿಪ್ಪಣಿ: ಉಷಾ ಅನಿರುದ್ಧರ ಮಿಲನ ಮತ್ತು ಏಕಾಂತ. ಕವಿಯ ಶೃಂಗಾರ ವರ್ಣನೆ –**
ನೆನದನು ಚಿತ್ರಲೇಖೆಯ ಧೈರ್ಯವನು ತಲೆ
ದೂನೆದನು ವಿಸ್ಮಿತ ತಾನಾಗಿ
ನೆನದನು ಹರ್ಷಾಶ್ರುಗಳಿಂದ ತನ್ನಯ
ಮನದಣಿವಂತೆ ಹೊಗಳಿದನು ॥

ಕುಂಭಾಂಡನಾತ್ಮ ಸಂಭವೆಯ ಕೀರ್ತಿಸುವ
ಶಂಬರಾರಿ ಅನಿರುದ್ಧನ
ಚೆಂಬಾಯ್ದೆರೆಯ ಚೆಲುವ ಕಂಡು ಕುಮಾರಿಗೆ
ಮುಂಬರಿದುದು ಕಾಮಲೀಲೆ ॥

ಭ್ರಮಿಸಿದ ಭಾಮನಿಯಧರ ಚುಂಬನದೊಳು
ರಮಿಸಿದನವಳಿಚ್ಛೆಯರಿದು
ಕ್ರಮದೊಳು ರತಿಸುಖವಡೆದು ಮೂರ್ಛೆಯಲಿ ವಿ
ಶ್ರಮಿಸಿದರು ಬಾಹು ಬಂಧನದಿ ॥

**ಟಿಪ್ಪಣಿ: ಪರಮೇಶ್ವರ ಮತ್ತು ಶ್ರೀಕೃಷ್ಣನ ಯುದ್ಧ ವರ್ಣನೆ –**
ಎತ್ತ ನೋಡಿದೊಡೆ ಭೇದಿಸಲಳವಲ್ಲ ಕಾ
ರ್ಗತ್ತಲೆ ಕವಿದುದಾಹವದಿ
ಅತ್ತ ಕಠಾರಿಯ ಭಟರೊಪ್ಪಿದರು ಪುರು
ಷೋತ್ತಮನಂಗರಕ್ಷೆಯಲಿ ॥

ಬಾಣನ ಭಟರು ಯಾದವರೆಂಬ ಬಗೆಯ ಕ
ಣ್ಗಾಣದೆ ತಮ್ಮಲ್ಲಿ ತಾವು
ಹಾಣಾಹಣೆಯೊಳು ತಿವಿದಾಡುವುದ ಜಗ
ತ್ರಾಣ ನಿರೀಕ್ಷಣೆಗೆಯ್ದನು ॥



ಧುರದೊಳು ತುರುಗಿರ್ದ ಕೃತಕಾಂಧಕಾರ ವಿ
ಸ್ತರವ ನಿರ್ಮೂಲಗೆಯ್ವುದಕೆ
ವರ ಮೂಡಿಗೆಯಿಂದ ತೆಗೆದೆಚ್ಚ ಕೃಷ್ಣ ಭಾ
ಸ್ಕರ ಬಾಣದಿಂದ ರಕ್ಕಸನ ॥

ಕತ್ತರಿಸಿದ ಬಾಹುಮೂಲದಿ ಚೆಲ್ಲುವ
ನೆತ್ತರ ನಿಲಿಸಿ ಮೆಯ್ದಡಹಿ
ಚಿತ್ತಜಹರ ಲಜ್ಜಿತನಾದ ಭಕ್ತನ
ಕುಸ್ತರಿಸದ ಕೃಪೆಯಿಂದ ॥

ಕೇಶವನೆಡೆಗೆನ್ನಡೆಗಾವನೊರ್ವನು
ದ್ವೇಷ ಬುದ್ಧಿಯ ಮಾಡಿದರೆ
ದೋಷ ಸಂಭವಿಸುವುದೆಂದು ಧೂರ್ಜಟಿ ದೈ
ತ್ಯೇಶಗೆ ತಿಳಿಯ ಹೇಳಿದನು ॥

ಯದುಕುಲೋತ್ತಮ ಮೊಮ್ಮಗನಿಗುಷಾದೇವಿಯ
ಮದುವೆಯ ಮಾಡುವುದೆನುತ
ವಿಧುಮಕುಟಾಂಕಿತ ಬಾಣಾಸುರೇಶನ
ಸದುಮಂತ್ರಿಯೊಡನೆ ಪೇಳಿದನು ॥

ಸಂಭ್ರಮವಡೆದ ಶೋಣಿತಪುರ ನಿಖಿಳ ಕು
ಟುಂಬುವ ನೋಯಿಸದಂತೆ
ಕುಂಭಾಂಡನೊಡನೆ ಕಾಣಿಸಿಕೊಂಬುದೆನುತ ಪೀ
ತಾಂಬರನೊಳು ರುದ್ರ ನುಡಿದ ॥

ಬೋಧಾರುಹನಾದ ಪರಮೇಶ ನಿಮ್ಮೊಳು
ಭೇದವಿಲ್ಲೆಂದು ಸೂಚಿಸಲು
ರೋದನ ತೀರ್ಕಣಿಸಿತು ನಿಮ್ಮ ಮೊಮ್ಮಗೆ
ಮಾಧವ ಕೊಟ್ಟೆ ಮತ್ಸುತೆಯ ॥

ಇಂತೀ ಬಿನ್ನಹಂಗಳ ನೀನೆನ್ನಯ
ಮಂತಿರಿಯಿಂದೊಪ್ಪಿಕೊ ಎಂದು
ದಂತಿಚರ್ಮಾಂಬರಧರ ಸಮಕ್ಷದಲಿ ನಿ
ಭ್ರಾಂತಿಯಿಂ ಬೀಳ್ಕೊಂಡ ಹರಿಯ ॥

ಅರಳಿದ ಬೆಳ್ದಾವರೆಗಣ್ಣನ ಕೂಡೆ
ಮರಳಿ ಧೂರ್ಜಟಿ ಮಾತನಾಡಿ
ಭರದಿಂದ ವರ ಗಣಸಹಿತ ಬಾಣನ ಕೊಂಡು
ತೆರಳಿದ ಕೈಲಾಸಪುರಿಗೆ ॥

ದುಷ್ಟರ ಮುರಿದು ಸಜ್ಜನರ ಪಾಲಿಗೆ ಸಂ
ತುಷ್ಟಿಯ ಮಾಡಿ ಭಕ್ತರಿಗೆ
ಇಷ್ಟಾರ್ಥವನೀವ ಕೃಷ್ಣ ದ್ವಾರಕಿಯೊಳ
ಗಷ್ಟೈಶ್ವರ್ಯದೊಳೊಪ್ಪಿದನು ॥

**ಟಿಪ್ಪಣಿ: ಶ್ರೀಕೃಷ್ಣನ ದ್ವಾರಕೆ –**
ಭೋಜ್ಯವಸ್ತುಗಳೊಳು ಮುಖ್ಯವಾದುದು ಲಲಿ
ತಾಜ್ಯ ನಿರ್ಜರ ಜನರಿಗದು
ಸ್ವಾಜ್ಯ ಗುಣಾಢ್ಯ ಶ್ರೀಕೃಷ್ಣ ಸುಮೃದ್ದಸಾ
ಮ್ರಾಜ್ಯವನಾಳಿದನು ಮುದದಲಿ ॥

ನಿರ್ಮತ್ಸರದೊಳೀ ಕೃತಿಯ ಕೇಳ್ದವರಿಗೆ
ಧರ್ಮಾರ್ಥಕಾಮ ಮೋಕ್ಷಗಳ
ಭರ್ಮಾಂಬರನೀವ ಭಾಮೆ ಕೇಳು ನಮ್ಮದು
ಷ್ಕರ್ಮ ವಿಚ್ಛೇದನವಾಯ್ತು ॥

ಯೋಗಿ ಹೃತ್ಕಮಲಾಸನ ದೈತ್ಯ ಸಂಹಾರಿ
ರಾಗಿಪ ಭೋಗದೇವೇಂದ್ರ
ಕಾಗಿನೆಲೆಯ ನರಸಿಂಹಾದಿಕೇಶವ
ಸಾಗುವ ಜನಮನೋರಥವ ॥



**ಉಪಸಂಹಾರ:**
ವರ ಮೋಹನ ತರಂಗಿಣಿಯೆಂಬ ಕಾವ್ಯವ
ಬರೆದೋದಿ ಕೇಳಿದ ಜನರ
ತರಣಿಚಂದ್ರಮರುಳ್ಳನಕ ಸತ್ಕೃಪೆಯಿತ್ತು
ಪೊರೆವ ಲಕ್ಷ್ಮೀಕಾಂತ ಬಿಡದೆ ॥

**ಸಂಗ್ರಹ ನೆರವು: ಪ್ರೊ. ಜ್ಯೋತಿ ಹೊಸೂರ.**

## ನಳಚರಿತ್ರೆ

'ನಳಚರಿತ್ರೆ' ಭಾಮಿನಿ ಷಟ್ಪದಿ ಕಾವ್ಯ. ಒಂಬತ್ತು ಸಂಧಿಗಳುಳ್ಳ ಸುಮಾರು ೪೮೧ ಪದ್ಯಗಳಿರುವ ಕನ್ನಡದ ದಮಯಂತಿ ನಳರ ಚರಿತ್ರೆ ಇದು.

**ಕಾವ್ಯ ಹಿನ್ನೆಲೆ:**

ಈ ಹಿಂದೆ ಚಂಪೂ ಪ್ರಕಾರದಲ್ಲಿ ಚೌಂಡರಸ 'ನಳಚರಿತ್ರೆ' ಎಂಬ ಕಾವ್ಯವನ್ನು ಬರೆದಿದ್ದರೂ ಅದು ಅಷ್ಟೊಂದು ಜನಪ್ರಿಯವಾಗಿರಲಿಲ್ಲ. ಆದರೆ ಕನಕದಾಸರು ಜಾನಪದೀಯವಾಗಿದ್ದ ಕತೆಯನ್ನು ಅಷ್ಟೆ ಜಾನಪದೀಯವಾಗಿ ಅಭಿವ್ಯಕ್ತಿಸಿದ್ದಾರೆ. ಕೃತಿಯ ಓದು ಕೂಡ ಜನಪದದ ಶೈಲಿಯಲ್ಲಿಯೇ ಇರುವುದನ್ನು ಕಾಣಬಹುದು. ಮೂಲತಃ ನಳನ ಕತೆ ರಾಮಾಯಣದಲ್ಲಿ ಪ್ರಸ್ತಾಪವಾದರೂ; ಮಹಾಭಾರತದ ವನಪರ್ವದಲ್ಲಿ ಕೊಂಚವಾಗಿ ಕಾಣಿಸಿಕೊಳ್ಳುತ್ತದೆ. ಪಾಂಡವರು ವನವಾಸದಲ್ಲಿದ್ದಾಗ ರೋಮಶಮುನಿ ನಳಕತೆಯನ್ನು ಹೇಳುತ್ತಾನೆ. ಧರ್ಮರಾಯ ತಮಗೆ ಬಂದ ಕಷ್ಟಗಳನ್ನು ಕುರಿತು ಹೇಳಿದಾಗ ರೋಮಶಮುನಿ ಮನುಷ್ಯನಿಗೆ ದುಃಖವನ್ನು ಸುಖದ ಜೊತೆಗೆ ಸಮ ಪ್ರಮಾಣದಲ್ಲಿ ಅನುಭವಿಸಬೇಕೆಂದು ಬದುಕಿನಲ್ಲಿ ಕಷ್ಟ ಅನುಭವಿಸಿದ್ದ ನಳಚರಿತ್ರೆಯನ್ನು ಹೇಳುತ್ತಾನೆ. ಇದೊಂದು ಪ್ರೇಮಕತೆ ಎಂದು ಮೇಲುನೋಟಕ್ಕೆ ಅನಿಸಿದರೂ ದಾಂಪತ್ಯದ ಒಳಸಂಕಟಗಳು, ದೈವ–ಮನುಷ್ಯರ ವಾಗ್ವಾದ, ಪರಿಸರ–ನಗರ, ಪ್ರಭುತ್ವದ ಸಂಕಟಗಳು ಮುಂತಾದ ನೆಲೆಗಳನ್ನೂ ಗಮನಿಸಬಹುದು. ಕನಕದಾಸರು ಈ ಕೃತಿಗೆ ನಳಚರಿತ್ರೆ ಎಂದು ಕರೆದರೂ ವಾಸ್ತವವಾಗಿ ಇದು ದಮಯಂತಿ ಕತೆಯಾಗಿಯೇ ನಿರೂಪಣೆಗೊಂಡಿದೆ. ಇದೊಂದು ಸಂವಾದ ಕೃತಿಯಾಗಿಯು ಮಹತ್ವ ಪಡೆದುಕೊಂಡಿದೆ.

**ಕಾವ್ಯದ ಒಳನೋಟ:**

ನಳ ಮತ್ತು ದಮಯಂತಿಯರ ಸಮಾಗಮಕ್ಕೆ ಕಾರಣವಾಗುವ ಹಂಸಪಕ್ಷಿಯು ಮುಖ್ಯ ಪಾತ್ರವಹಿಸುತ್ತದೆ. ಹಾಗಾಗಿ ನಾವು ಹಂಸ–ನಳರ ಸಂವಾದವನ್ನು ಬೇರೊಂದು ದಿಕ್ಕಿನಲ್ಲಿ ನೋಡಬಹುದು. ಇದು ಸುಖದ ನೆಲೆಯಲ್ಲಿ ಕಾಣಿಸಿಕೊಂಡರೆ; ನಳ ಜೂಜಿನಲ್ಲಿ ಸೋತು ಕಾಡಿನಲ್ಲಿ ಅಲೆದಾಡುತ್ತಿದ್ದಾಗ ಕಾರ್ಕೋಟಕ ಸರ್ಪ ಅವನನ್ನು ಕಚ್ಚಿ ಕುರೂಪಿಯನ್ನಾಗಿಸುತ್ತದೆ. ಹಾಗಾಗಿ ನಳ ಮತ್ತು ಸರ್ಪದ ನಡುವಿನ ಸಂವಾದವು ದುಃಖದ ನೆಲೆಗೆ, ಕಷ್ಟಗಳಿಗೆ ದಾರಿ ಮಾಡಿಕೊಡುತ್ತದೆ. ಕನಕದಾಸರ ಉಳಿದ ಕೃತಿಗಳಿಗೆ ಹೋಲಿಸಿದರೆ ನಳಚರಿತ್ರೆ ಪುರಾಣದ ಗರ್ಭದಲ್ಲಿಯೇ ಮನುಷ್ಯ ಬದುಕಿನ ಕತೆಯನ್ನು ಸಮರ್ಥವಾಗಿ ಅಭಿವ್ಯಕ್ತಿಸಿದೆ ಎನ್ನಬಹುದು. ನಳ–ದಮಯಂತಿಯರು ಅರಮನೆಯ ಸುಖಗಳಿಗೆ ಒಗ್ಗಿಕೊಂಡರೂ ಅವರ ಬದುಕು ಸಾಗುವುದು ಕಾಡಿನಲ್ಲಿ ಮತ್ತು ಬೇರೆಯವರ ಅಡಿಯಲ್ಲಿ ಎನ್ನಬಹುದು. ಆದ್ದರಿಂದ ಬದುಕಿನ ಪಲ್ಲಟಗಳ ದೃಷ್ಟಿಯಿಂದಲೂ ಇದು ಮುಖ್ಯವಾಗುತ್ತದೆ. ಕನಕದಾಸರು ಬಳಸುವ ಭಾಷೆ, ಶೈಲಿ, ಕತೆಗೆ ತಕ್ಕಂತೆ ತರುವ ಗಾದೆ ಮಾತುಗಳಿಂದ ನಿರೂಪಣೆಯ ಕ್ರಮ ಮತ್ತಷ್ಟು ಶಕ್ತಿಯುತವಾಗಿದೆ.

**ಕಾವ್ಯ ಪಠ್ಯದ ಆಯ್ದ ಭಾಗ:**

**[ಒಂದನೆಯ ಸಂಧಿ]**

ರಾಯರೊಳಗಗ್ಗಳೆಯನಾ ಕೌಂ
ತೇಯನಿಗೆ ರೋಮಶ ಮಹಾಮುನಿ
ರಾಯ ವಿಸ್ತರಿಸಿದನು ನಳಭೂವರನ ಚರಿತೆಯನು
ಶ್ರೀಯರಸ ವರಪುರದ ಚೆನ್ನಿಗ
ರಾಯನಂಕಿತಮಾಗಿ ಪೇಳುವೆ
ಪ್ರೀಯದಿಂದಾಲಿಸುವ ಸುಜನರಿಗೀ ಮಹಾಕಥೆಯ ॥

ಜನಪ ಕುರುಭೂಪಾಲನೊಳು ಜೂ
ಜಿನಲಿ ರಾಜ್ಯವ ಸೋತು ಯಮನಂ
ದನನು ತನ್ನನುಜಾತರೊಡನೆಯೆ ಸತ್ಯವನು ಬಿಡದೆ
ವನಿತೆ ಧೌಮ್ಯಮುನೀಂದ್ರ ಮಂತ್ರೀ
ಜನ ಸಹಿತ ನಡೆತಂದು ಕಾಮ್ಯಕ
ವನದೊಳಗೆ ಸಂಚರಿಸುತಿರ್ದನು ತೀರ್ಥಯಾತ್ರೆಯಲಿ ॥

ಗುಣದೊಳತಿ ಶೀಲದಲಿ ಮಾತಿನ
ಭಣಿತಿಯಲಿ ಗಾಂಭೀರ್ಯದಲಿ ವಿತ
ರಣದಲನುಪಮ ವಿದ್ಯೆಯಲಿ ಗುರು ದೈವಭಕ್ತಿಯಲಿ
ಪ್ರಣುತಿಸಲು ಶರ್ವಾಣಿ ರತಿಯರಿ
ಗೆಣೆಯೆನಿಪ ಸುಂದರಿಗೆ ಮಿಕ್ಕಿನ
ಬಣಗು ಸತಿಯರು ಸರಿಯೆ ಲೋಕದೊಳೆಂದನಾ ಮುನಿಪ ॥

ಈ ಪರಿಯೊಳಾ ಕಾಮಿನಿಗೆ ಶೈ
ತ್ಯೋಪಚಾರವ ಮಾಡಿದರು ಪರಿ
ತಾಪ ವೆಗ್ಗಳಿಸಿದುದು ಇದಕಿನ್ನೇನು ಹದನೆನುತ
ಚಾಪಳೆಯರಾಲೋಚಿಸುತ ಕಡು
ಪಾಪಿಯಂಗಜನೆಂದು ಬಯ್ಯುತ
ತೋಪಿನೆಡೆಗಿರದೈದಿ ತಂದರು ಸತಿಯ ಸಂತೈಸೆ ॥

**ಟಿಪ್ಪಣಿ: ದಮಯಂತಿ ಮತ್ತು ನಳರ ಸಮಾಗಮ ಹಂಸದ ಮೂಲಕ –**
**[ಎರಡನೆಯ ಸಂಧಿ]**
ಹೇಳುತಿರೆ ನುಡಿನುಡಿಗೆ ಮೆಚ್ಚುತ
ಕೇಳಿ ತಲೆದೂಗಿದನು ನೈಷಧ
ನಾಲಿಗಳಿಗೆ ಸರೋಜಮುಖಿ ಗೋಚರಿಸಿದಂತಾಗೆ
ಬಾಲಿಕೆಯ ಮೋಹಿಸಿದ ಪುಷ್ಪಶ
ರಾಳಿಯಲಿ ಮನನೊಂದು ಶಿವ ಶಿವ
ಲೋಲಲೋಚನೆಯೆಂತು ತನಗಹಳೆನುತ ಚಿಂತಿಸಿದ ॥

ಬಂದು ಫಲವಸ್ತುಗಳ ಕಾಣಿಕೆ
ಯಿಂದ ಕೈಮುಗಿದರಸ ಮೃಗಘನ
ವಿಂದು ಬೇಂಟೆಗೆ ಗಮಿಸಬೇಕೆನೆ ನೃಪತಿ ನಸುನಗುತ
ಇಂದು ವಿರಹವ ಕಳೆವಿಡಿದು ಲೇ
ಸೆಂದು ಶಬರರ ಕಳುಹಿಯೋಲಗ
ದಿಂದಲರಮನೆಗೆಯ್ದಲಸ್ತಾಂಬುಧಿಯೊಳಿನನಿಳಿದ ॥

ಕರಿಗಳನು ಮುರಿದಿಡುವ ಸಿಂಹಕೆ
ನರಿಗಳಿದಿರೇ ತಾನು ನಿನಗಂ
ತರವೆ ಸಾಕಂತಿರಲಿ ಕಂಡವರೆಲ್ಲ ಕಡುನಗರೆ
ಅರಿಭಯಂಕರ ಶತ್ರುಗಳ ಸಂ
ಹರಿಸುವುದು ನೃಪನೀತಿ ನಿನಗಿದು
ತರವೆ ಬಿಡು ಪರಹಿಂಸೆ ದೋಷವಿದೆಂದುದಾ ಪಕ್ಷಿ ॥



ಬಡಬಗೌತಣವಿಕ್ಕುವೆಡೆಯೊ
ಕ್ಕುಡಿತೆ ಜಲವೇ ಮಂಜು ಸುರಿಯ
ಲ್ಕೊಡನೆ ಕೆರೆ ತುಂಬುವುದೆ ನೃಪ ನೀನೆನ್ನ ಭುಂಜಿಸಲು
ಒಡಲಿಗಾಪ್ಯಾಯನವೆ ಕೇಳೆಲೆ
ಪೊಡವಿಪತಿ ಬಿಡು ನನ್ನ ಮನೆಯಲಿ
ಮಡದಿ ಸುತರುಮ್ಮಳವ ನೋಡೆಂದೊರಲಿತಾ ಪಕ್ಷಿ ॥

ಅವಳು ನಿನಗೊಲಿವಂತೆ ಮಾಡುವೆ
ಶಿವನ ಕೃಪೆ ನಿನಗುಂಟು ನಮ್ಮಲಿ
ಸವಡಿನುಡಿಯಿಲ್ಲರಸ ನಂಬುವುದೆನ್ನ ನೀನೆನಲು
ಅವನಿಪತಿ ನಸುನಗುತ ಹಂಸೆಯ
ಸವಿನುಡಿಗೆ ಮನಸೋತು ವಿರಹದ
ತವಕದಲಿ ಹೇವರಿಸಿ ನುಡಿದನು ನಳನು ಖಗಪತಿಗೆ ॥

ಕೆಳದಿಯರ ಕೆಲಕೊತ್ತಿ ತಾನೇ
ಮೆಳೆಯ ಹೊಕ್ಕಳು ಬಾಗೆ ಸೆಳೆ ನಡು
ಬಳುಕೆ ಕುಚಭಾರದಲಿ ಮೇಲುದು ಜಾರೆ ಮುಡಿ ಕೆದರೆ
ಜಲಜಮುಖಿ ಬೆಮರಿಡಲು ಕೊರಳಿನ
ಲಲಿತದೇಕಾವಳಿಗಳಲ್ಲಾ
ಡಲು ಸೆರಗನಳವಡಿಸಿ ನಿಂದಳು ಬಳಲಿ ಬಿಸುಸುಯ್ದು ॥

ಎಲೆ ಸರೋರುಹಗಂಧಿ ನೀನೆನ
ಗೊಲಿದು ಮನದಲಿ ಹಿಡಿವೆನೆಂಬೀ
ಚಲವಿದೇತಕೆ ಮಾಣು ನಾವಂಬರದ ಪಕ್ಷಿಗಳು
ನಿಲುಕುವವರಾವಲ್ಲ ಬರಿದೇ
ಬಳಲದಿರು ತಾ ಬಂದ ಪರಿಯನು
ತಿಳುಹುವೆನು ನಿನಗೆಲ್ಲವನು ಕೇಳೆಂದುದಾ ಪಕ್ಷಿ ॥

ಪರಮ ಗುಣನಿಧಿ ಪಕ್ಷಿ ಕೇಳ್ ಬಾ
ಹಿರನು ಪಾತಕಿ ಮದನನೆಲೆ ನಿ
ಷ್ಠುರದೊಳೆಸೆಯಲು ಪುಷ್ಪಬಾಣದಿ ನೊಂದುದೆನ್ನೊಡಲು

ಕರುಣರಸ ಧಾರೆಯಲಿ ತಾಪವ
ಪರಿಹರಿಸಬೇಕೆಂದು ನೀನಾ
ಧರಣಿಪತಿ ನಳನೃಪಗೆ ಬಿನ್ನೈಸೆಂದಳಿಂದುಮುಖಿ ॥

ಆಗ ನಳಭೂವರನ ದಕ್ಷಿಣ
ಭಾಗ ಭುಜನಯನಂಗಳದುರಿದು
ವಾಗ ಕೇಳಿದನಿದರ ಫಲವೇನೆಂದು ಭೂಸುರರ
ಭೋಗಸುಖದರ್ಶನದ ಫಲವಿಂ
ದೀಗಲಹುದೆನಲಾ ಸಮಯದಿ ಸ
ರಾಗದಲಿ ನಡೆತಂದುದಾ ನೃಪನೆಡೆಗೆ ಕಲಹಂಸೆ ॥

ಆ ತಳೋದರಿ ನಿನ್ನ ಮೇಲಣ
ಪ್ರೀತಿಯಿಂದೊಲಿದಂತರಂಗದಿ
ಕಾತರಿಸುತಿಹಳಂಗಜನ ಉಪಟಳದಿ ಕಡುನೊಂದು
ಧಾತುಗುಂದಿಹಳಾ ತರುಣಿ ಮನ
ಸೋತು ಹಂಬಲಿಸುವಳು ನಳನೃಪ
ನಾತನೇ ಪತಿಯೆಂದು ನಂಬಿಹೆನೆಂದಳಿಂದುಮುಖಿ ॥

**ಟಿಪ್ಪಣಿ: ವಿವಾಹ ಹಾಗೂ ವನವಾಸ –**
[**ಮೂರನೆಯ ಸಂಧಿ**]
ಧರಣಿವಲಯ ದಿಗಂತದವನೀ
ಶ್ವರರು ಭೂಸುರ ಸಿದ್ಧ ವಿದ್ಯಾ
ಧರರು ಸುಜನರು ಮಲ್ಲ ಸಚಿವರು ಮಕುಟವರ್ಧನರು
ಪರಮ ಪುರುಷರು ಪಂಡಿತರು ಕವಿ
ವರರು ನಟ ಗಾಯಕರು ವಿದ್ಯಾ
ಧರರು ದೈವಜ್ಞರುಗಳಗಣಿತರಾಗಿ ನೆರೆದುದು ರಾಯ ಕೇಳೆಂದ ॥

ಕೇಳಿದಾ ಮಾತಿನಲಿ ಚಿಂತೆಯ
ತಾಳಿದನು ಚಿತ್ತದಲಿ ನಳನೃಪ
ಲೋಲಲೋಚನೆ ತನ್ನನೇ ಪತಿಯೆಂದು ಭಜಿಸಿಹಳು



ಆ ಲತಾಂಗಿಯ ಮೇಲೆ ಪರಮ ವಿ
ಶಾಲ ಮನವಿಹುದಿನ್ನು ಶಿವಶಿವ
ಬಾಲಕಿಯ ಬೆಸಗೊಳಲು ನಾಲಗೆಯೆಂತು ತನಗೆಂದ ॥

ಆ ಯುವತಿಯರು ಕಾರ್ಯಗಳ ನೆರೆ
ಬೀಯ ಮಾಳ್ಪರು ಕುಟಿಲ ವಿದ್ಯದಿ
ಮಾಯೆಗಳ ಹಣ್ಣುವರು ನಿತ್ಯದಿ ಹುಸಿಯನಾಡುವರು
ಕಾಯವಳಿದರು ಅಂತರಂಗವ
ಬಾಯಬಿಡರನ್ಯಾವಾಡುವ
ರಾಯತಾಕ್ಷಿಯರಂದವಿದು ಸುರರಾಜ ಕೇಳೆಂದ ॥

ತಾಯೆ ಕೇಳಮರೇಂದ್ರ ನಿಮ್ಮ ನಿ
ಜಾಯತದ ಚೆಲುವಿಕೆಯ ಕೇಳಿದು
ಕಾಯಜನ ಶರಹತಿಗೆ ನೊಂದುರೆ ಕಳುಹಿದನು ನಮಗೆ
ಆಯತದ ಭೂಷಣವ ತೊಡು
ಸುರರಾಯನಿಗೆ ಸತಿಯಾಗು ಮರ್ತ್ಯದ
ರಾಯರಸ್ಥಿರರವರ ನೆಚ್ಚದಿರೆಂದರಾ ಸತಿಗೆ ॥

ಪದವಿ ಯಾವುದು ಲೋಕದಲಿ ಸುರ
ಪದವಿಯಲ್ಲದೆ ಬೇರೆ ಮಿಕ್ಕಿನ
ಪದವಿಯುಂಟೇ ತಾಯೆ ಭಾವಿಸಿ ನೋಡು ಚಿತ್ತದಲಿ
ಸದರವೇ ನರಜನ್ಮದವರಿಗೆ
ಒದಗಲರಿಯದು ಪುಣ್ಯ ನಿನಗಿದು
ಸುದತಿ ಕರುಣಿಸು ಮಾತನೆಂದರು ನಗುತ ರಂಭೆಯರು ॥

ಲಲನೆಯೊಲಿವುದಕಿನ್ನು ಹದನಿದು
ಹಲವು ಮಾತೇನೆಂದು ನಾಲ್ವರು
ನಳನ ರೂಪನು ತಾಳ್ದರಿತ್ತಲು ಧರಣಿವಲ್ಲಭರು
ನಲಿದು ಬರುತಿರೆ ಸ್ವರ್ಗ ಮರ್ತ್ಯಾ
ವಳಿಯ ಜನ ಸುರ ಸಿದ್ಧ ಕಿನ್ನರ
ರೊಲಿದು ಗುಹ್ಯಕ ಗರುಡ ಗಂಧರ್ವಾದಿ ಸುರರಲ್ಲಿ ॥

ಎನ್ನನೊಲಿದಿಹಳೆಂದು ಕೆಲಬರು
ಸನ್ನೆಮಾಡಿದಳೆಂದು ಕೆಲಬರು
ಗನ್ನದಿಂದೀಕ್ಷಿಸುತಲಿದ್ದರು ಕೆಲರು ಹುಬ್ಬಿನಲಿ
ಸನ್ನೆದೋರಿದಳೆಂದು ಕೆಲಬರು
ಬಿನ್ನಣದಿ ಮಿಗೆ ಓರೆ ನೋಟದ
ಕಣ್ಣಿನಿಂದೀಕ್ಷಿಸಿದಳೆಂದಾಡಿದರು ಕೆಲಕೆಲರು ॥

ವಾಣಿ ನೀರಜಪಾಣಿ ಬ್ರಹ್ಮನ
ರಾಣಿ ಪನ್ನಗವೇಣಿ ಸುಕೃತ
ಶ್ರೋಣಿ ಸುರನಿಕುರಂಬವಂದಿತೆ ಸತ್ಯಸಂಚಾರಿ
ವಾಣಿ ಸ್ತ್ರೀಕುಲರನ್ನೆ ವರಗೀ
ರ್ವಾಣಿ ರಕ್ಷಿಸು ರಕ್ಷಿಸೆಂದಾ
ಕ್ಷೋಣಿಪತಿ ಕೈಮುಗಿದು ಬೇಡಿದನಾ ಸರಸ್ವತಿಯ ॥

ವರ ಮುಹೂರ್ತದೊಳೇರಿದನು ಮಣಿ
ಕಿರಣದುನ್ನತ ರಥವ ನಳಭೂ
ವರನು ನಿಜಸತಿ ಸಹಿತ ಹೊಕ್ಕನು ನಿಷಧ ಪಟ್ಟಣವ
ಮೊರೆವ ಶಂಖ ಮೃದಂಗ ಭೇರಿಗ
ಳುರುಬಿ ಧಂಧಣಿರೆನಲು ಮಿಗೆ ಮೋ
ಹರಿಸಿತಾ ನಿಸ್ಸಾಳತತಿ ಘನವಾದ್ಯ ಘೋಷಿಸಲು ॥

**ಟಿಪ್ಪಣಿ: ಪುಷ್ಕರನ ಗೆಲುವು, ನಳದಮಯಂತಿಯರಿಗೆ ಕಾಡು (ಪುರಜನರ ದುಃಖ) –**
[**ನಾಲ್ಕನೆಯ ಸಂಧಿ**]

ಇಂತೆಸೆವ ಸಂಪತ್ತಿನಲಿ ಭೂ
ಕಾಂತ ನಳಚಕ್ರೇಶನಲಿ ದಮ
ಯಂತಿ ಪಡೆದಳು ಪುತ್ರಕನ ವರಪುತ್ರಿಯೊರ್ವಳನು
ಸಂತಸದೊಳಿರಲಾ ವಿದರ್ಭ ಪು
ರಾಂತರದಿ ನೆರೆದಖಿಳ ಜನ ಭೂ
ಕಾಂತರೊಡನೈತಂದು ಹೊಕ್ಕರು ತಮ್ಮ ನಗರಿಗಳ ॥

ಒಂದು ದಿವಸದೊಳಾಗ ನೃಪನಿಗೆ
ಬಂದುದಲ್ಪಾಚಮನ ಕಾಲದೊ
ಳಂದು ಶುದ್ಧಾಚಮನವಿಲ್ಲದೆ ನಿಂದು ನೀರ್ಗುಡಿಯೆ
ಇಂದು ತನಗಿದೆ ಸಮಯವೆಂದಾ
ನಂದದಲಿ ಕಲಿಪುರುಷ ರಾಯನ
ಸಂಧಿಸಿದ ವಿಧಿವಶವ ತಪ್ಪಿಸಲಾರ ಹವಣೆಂದ ॥

ಬಲ್ಲೆಯಾ ನೀನೆನ್ನ ಲೋಕಕೆ
ಬಲ್ಲಿದನು ತಾ ಕಲಿಪುರುಷ ನಳ
ನಲ್ಲಿ ದ್ಯೂತವನಾಡಿ ಗೆಲಿಸುವೆ ನಿನ್ನ ನೆತ್ತದಲಿ
ಒಲ್ಲೆನೆನದಿರು ಸಕಲರಾಜ್ಯದ
ವಲ್ಲಭನ ಮಾಡುವೆನು ನಡೆ ಹುಸಿ
ಯಿಲ್ಲ ನಿಷಧನ ಕಿತ್ತು ಬಿಸುಡುವೆ ನಂಬು ನೀನೆಂದ ॥

ಆಡಿದನು ಜೂಜಿನಲಿ ನೃಪ ಹೋ
ಗಾಡಿದನು ರಾಜ್ಯವನು ಕೋಶವ
ಕೇಡುಗರ ಕೈ ಮೇಳವಿಸಿದುದು ದೈವಗತಿಯಿಂದ
ಬಾಡಿತರಸನ ವದನ ಸಭೆಯಲಿ
ನೋಡಿದರು ಸಜ್ಜನರು ಮರುಗಿದ
ರಾಡಲೇನದನರಸ ಸೋತನು ವಿಧಿಯ ಘಟನೆಯಲಿ ॥

**ಟಿಪ್ಪಣಿ: ಕಾಡಿನಲ್ಲಿ ದಮಯಂತಿಯ ಅಳಲು –**
[**ಐದನೆಯ ಸಂಧಿ**]
ಮರುಗಲಿನ್ನೇಕರಸ ಬಿಡು ವಿಧಿ
ಬರೆದ ಬರೆಹವ ತಪ್ಪಿಸಲು ಹರಿ
ಹರವಿರಿಂಚಾದಿಗಳಿಗಳವೇ ನಮ್ಮ ಪಾಡೇನು
ಹರೆವುದಾಕ್ಷಣ ತುಂಬುವುದು ಗೋ
ಚರಿಸುವುದು ಸಿರಿ ನಿತ್ಯವೇನಿದ
ನರಿಯದವನೇ ನೋಯಲೇಕೆಂದಳು ಸರೋಜಮುಖಿ ॥

ನೆಳಲು ತನುವಿನ ಬಳಿಯೊಳಲ್ಲದೆ
ಚಲಿಸುವುದೆ ತಾ ಬೇರೆ ನಿಮ್ಮಡಿ
ನಳಿನದಲಿ ಸುಖದುಃಖವಲ್ಲದೆ ಬೇರೆ ಗತಿಯುಂಟೆ
ಹಳುವವೇ ಸಾಮ್ರಾಜ್ಯ ನಿಮ್ಮಡಿ
ನೆಳಲಿನಲಿ ತಾನಿರುವೆನಲ್ಲದೆ
ನಿಳಯವೇ ನನಗಡವಿಯೆಂದೆರಗಿದಳು ಪದಯುಗಕೆ ॥

ಹಾ ರಮಣ ನಳನೃಪತಿ ಹಾ ರಣ
ಧೀರ ಸದ್ಗುಣಹಾರ ರಿಪುಸಂ
ಹಾರ ನಿತ್ಯೋದಾರ ನಿರ್ಮಳ ಸತ್ಯಸಂಚಾರ
ಘೋರ ಕಾನನದೊಳಗೆ ನಂಬಿದ
ನಾರಿಯನು ಬಿಸುಡುವರೆ ತನಗಿ
ನ್ನಾರು ಗತಿ ಮುಖದೋರೆನುತ ಹಲುಬಿದಳು ದಮಯಂತಿ ॥

ಕಾಣಿರೇ ಅರಸಂಚೆಗಳೆ ನೀವ್
ಕಾಣಿರೇ ನಿಜಪತಿಯ ಶುಕ ಪಿಕ
ಕಾಣಿರೇ ಮೃಗ ಪಕ್ಷಿಗಳೆ ನಳಚಕ್ರವರ್ತಿಯನು
ಕಾಣಿರೇ ತರುಲತೆಗಳಿನಿಯನ
ಕಾಣಿರೇ ನೀವೆಂದು ಶೋಕದೊ
ಳೇಣ ಲೋಚನೆ ಹಲುಬಿದಳು ಹಲವಂಗದಲಿ ಪತಿಯ ॥

ಶೈಲಶಿಖರದೊಳಿರ್ದು ಕೇಳಿದ
ಬಾಲಕಿಯ ಶೋಕವನು ಬಿಲ್ಲಿನ
ಕೋಲುಗಾರನು ಕರದ ಖಡ್ಗದ ಶಬರನೈತಂದು
ಆ ಲತಾಂಗಿಯ ಪಿಡಿದು ನುಂಗುವ
ಕಾಲಭುಜಗನ ಕಂಡು ನಿಜ ಕರ
ವಾಳದಲಿ ಖಂಡಿಸಿದನಹಿಯನು ಬಿಡಿಸಿದನು ಸತಿಯ ॥

ಕಳೆದರಂದಿನ ರಾತ್ರಿಯನು ರವಿ
ಬೆಳಗಿದನು ಪೂರ್ವಾದ್ರಿಯಲಿ ಸಂ
ದಣಿಸಿ ನಡೆದರು ಮುಂದೆ ಕಂಡರು ಚೇದಿಪಟ್ಟಣವ
ಹೊಳೆವ ಹೇಮದ ಸೌಧಗಳ ತಳ
ತಳಿಪ ನೆರೆಯುಪ್ಪರಿಗೆಗಳ ಕಂ
ಡೊಲಿದು ಮನ ಹರುಷದಲಿ ಹೊಕ್ಕರು ಸತಿಸಹಿತ ಪುರವ ॥

**ಟಿಪ್ಪಣಿ: ಕಾಡಿನಲ್ಲಿ ನಳನ ಅಳಲು –**
**[ಆರನೆಯ ಸಂಧಿ]**

ಆಗಲಾ ದನಿಗೇಳಿ ನೃಪತಿ ಸ
ರಾಗದಿಂದವೆ ಬಂದು ಹೊಕ್ಕನು
ಕೂಗಿದವರಾರೆನುತ ಬರುತಿರೆ ಕಂಡನುರಗಪತಿ
ಪೋಗುತಿದೆಯೆನ್ನಸುವು ಸಲಹು ಷ
ಡಾಗಮಜ್ಞ ನೃಪಾಲಯೆನಲಾ
ಭೋಗಿಯನು ಕಂಡರಸ ನೀನಾರೆಂದು ಬೆಸಗೊಂಡ ॥

ಉರಗಪತಿ ಕಾರ್ಕೋಟಕನು ತಾ
ನರಸ ಕೇಳೀ ಬನದೊಳಿರುತಿರೆ
ಪರಮ ಋಷಿ ಬಂದೆನ್ನ ತಾಗಿದನಂದು ಭೀತಿಯಲಿ
ಕರೆದುಕೊಟ್ಟನು ಶಾಪವನು ಸಂ
ಚರಿಸದಂತಿರೆಯೆನಗೆಯಿದು ಪರಿ
ಹರಿಸಲೆಂದಿಗೆ ಮುನಿಪ ಕರುಣಿಪುದೆಂದೊಡಿಂತೆಂದ ॥

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳ ಉದುರಿದ ರೋಮಮೀಸೆಗಳ
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡ ರೂಪಿನ ಹರಕು ಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ ॥

ಏಕೆ ನೃಪತಿ ವೃಥಾ ಮನೋವ್ಯಥೆ
ಕಾಕಬಳಸಲು ಬೇಡ ನೀನವಿ
ವೇಕಿಯೇ ಸಾಕಿನ್ನು ನಿನಗುಪಕಾರವಂಜದಿರು
ಲೋಕ ನಿನ್ನನು ಕಾಣದಂತಿರ

ಬೇಕೆನುತಲೇರಿಸಿದೆ ಗರಳವ
ನೇಕ ಉಪಕಾರಂಗಳಹವದರಿಂದ ನಿನಗೆಂದ ॥

**ಟಿಪ್ಪಣಿ: ಚೇದಿ ನಗರಕ್ಕೆ ದಮಯಂತಿ ಪ್ರವೇಶ. ತಂದೆಯ ಅನ್ವೇಷಣೆ –**
**[ಏಳನೆಯ ಸಂಧಿ]**
ಜನಪ ಕೇಳ್ ಬಾಹುಕನು ವಾಲಾ
ಖ್ಯನಲಿ ಸಖ್ಯವ ಬೆಳೆಸುತಾತನ
ನನುದಿನವು ಕೂಡಿರ್ದನೊಂದಾನೊಂದುದಿನ ರಾತ್ರಿ
ವನಜಮುಖಿ ದಮಯಂತಿಯೊಳು ಚುಂ
ಬನ ಸರಸ ಸಲ್ಲಾಪದಿಂದಿಹ
ಕನಸ ಕಂಡೆಚ್ಚರದಿ ಕಾಣದೆ ಸತಿಗೆ ಹಲುಬಿದನು ॥

ಬಡವರುದರದೊಳುದಿಸಿ ಸುಖವನು
ಪಡೆಯಲೊಲ್ಲದೆ ಬಂದು ನೀನೀ
ಪೊಡವಿಪತಿಯುದರದಲಿ ಸಂಜನಿಸುವರೆ ಎಲೆ ತಾಯೆ
ಗಿಡಮೆಳೆಗಳಾರಣ್ಯದಲಿ ತನು
ವಿಡಿದು ಸೈರಿಪುದೆಂತು ಮಗಳೇ
ಸುಡು ತನುವನಿದನೆಂದು ಮರುಗಿದಳವಳ ನಿಜಜನನಿ ॥

ಇಂದುವದನೆ ವಿದರ್ಭಪಟ್ಟಣ
ದಿಂದ ಬಂದೆನು ತಾನು ಭೂಸುರ
ವಂದ್ಯನೆನ್ನಭಿಧಾನ ಕೇಳು ಸುದೇವನೆಂಬುವುದು
ಇಂದು ನಿಮ್ಮನು ನೋಡ ಕಳುಹಿದ
ತಂದೆ ಭೀಮನೃಪಾಲನಾತನ
ನಂದನಿಗೆ ತಾ ಸಖನು ಚಿತ್ತೈಸೆನ್ನ ಬಿನ್ನಪವ ॥

**ಟಿಪ್ಪಣಿ: ದಮಯಂತಿಯನ್ನು ಕಂಡು ಹಿಡಿಯುವುದು –**
**[ಎಂಟನೆಯ ಸಂಧಿ]**
ಕ್ಷಿತಿಯೊಳೆಲ್ಲಿಹನೋ ಪರಸ್ತ್ರೀ
ರತಿಗೆ ಮನಸೋತನೋ ತಪಸಿನ
ವ್ರತವ ಕೈಕೊಂಡನೋ ದನುಜರ ಬಲೆಗೆ ಸಿಲುಕಿದನೊ



ವಿತಳಕಿಳಿದನೊ ಚೆಲುವಿನಮರಾ
ವತಿಗೆ ನಡೆದನೊ ತೊರೆದು ನಳಭೂ
ಪತಿಯ ಕಾಣೆನು ತನಗೆ ಗತಿಯೇನೆಂದಳಿಂದುಮುಖಿ ॥

ನಳನೃಪತಿ ನಿಜರಾಜತೇಜವ
ನುಳಿದು ತಾ ಪ್ರತಿರೂಪುದಾಳಿಹ
ನಿಳೆಯೊಳಗ್ಗದ ಸಭೆಯೊಳಗೆ ನೀವೆಂಬುದೀ ನುಡಿಯ
ಹಳುವದಲಿ ಸತಿಯುಟ್ಟ ಸೀರೆಯ
ಸೆಳೆಯುತರ್ಧವ ಕೊಂಡು ನಾರಿಯ
ಕಳೆದು ಹೋದವರುಂಟೆಯೆನಲುತ್ತರವ ಪೇಳುವನು ॥

ಸತಿಗೆ ವಂಚನೆಗೈದ ಪತಿ ತಾ
ಮತಿವಿಕಳನಂತಿರಲಿ ಭೂಸುರ
ಪತಿಯೆ ಕೇಳಾ ಸತಿಗೆ ಭಂಗವೆ ಪತಿಗೆ ಕೊರತೆ ಕಣಾ
ಪತಿವ್ರತವನಾಚರಿಸುವಳು ನಿಜ
ಪತಿಯ ಗುಣದೋಷಗಳನೆಣಿಪಳೆ
ಗತಿಗೆ ಕಾರಣ ಸತ್ಯವೇ ತನಗೆಂದನವ ನಗುತ ॥

ತಾಯೆ ಚಿತ್ತೈಸಿನ್ನವನ ಕರ
ಣಾಯತನವೇನೆಂಬೆ ಲೋಕದ
ಸ್ತ್ರೀಯರೊಳಗಿನ್ನಿಲ್ಲ ರಚಿಸುವ ಶಾಕಪಾಕದಲಿ
ಮಾಯವನು ಮಿಗೆ ತಿಳಿಯಲರಿಯದು
ಪಾಯದಿಂದೀಕ್ಷಿಸಲು ಸಕಲ ರ
ಸಾಯನವು ಪರಿಪಕ್ವವಾಗಿದೆ ಪೇಳಲರಿದೆಮಗೆ ॥

ತಾಯೆ ಸಂಶಯವಿಲ್ಲ ನೈಷಧ
ರಾಯನೀತನು ಸೂತನಲ್ಲ ವಿ
ಡಾಯದಲಿ ಬಂದಿಹನು ನೋಡು ಕುರೂಪಿ ವೇಷದಲಿ
ರಾಯರೊಳಗಗ್ಗಳೆಯ ನಳನೃಪ
ಮಾಯವನು ತೋರಿಹನು ಇವನ ನಿ
ಜಾಯತನ ತಾ ಬಲ್ಲೆ ಕರೆಸೆಂದಳು ಸರೋಜಮುಖಿ ॥

ತುರುಬ ಹಿಡಿದೆತ್ತಿದನು ಸತಿಯಳ
ಸುರಿವ ಕಂಬನಿದೊಡೆದು ನುಡಿದನು
ಬರಿದೆ ಚಿಂತಿಸಲೇಕೆ ಮಾನಿನಿ ಬಿಡು ಮನೋವ್ಯಥೆಯ
ಅರಿಯದವಳೇಂ ನೀನು ಲೋಕದ
ಸರಸಿಜಾಕ್ಷಿಯರೆಲ್ಲರಿಗೆ ನೀ
ಗುರುವಲಾ ಬರಿದೆನ್ನ ಬಯಸಲು ಬೇಡ ಹೋಗೆಂದ ॥

**ಟಿಪ್ಪಣಿ: ಪುಷ್ಕರನ ಜೊತೆ ಜೂಜು ಯುದ್ಧ, ಸಮಾಗಮ –**
**[ಒಂಬತ್ತನೆಯ ಸಂಧಿ]**
ಕಲಿಪುರುಷನಿಂದಾದುದಪಹತಿ
ಲಲನೆ ಪುತ್ರರನಗಲಿ ಕಷ್ಟವ
ಬಳಸಿದೆಯಲಾ ನೊಂದು ಸತ್ಯವ ಬಿಡದೆ ಸಂಚರಿಸಿ
ಸುಲಭನಾದೆ ಕುಲಾಂಗನೆಯ ವ್ರತ
ಫಲದ ಪುಣ್ಯೋದಯದಿ ನಿಜಸಿರಿ
ಫಲಿಸಿತಿನ್ನೀ ಲೋಕದಲಿ ನಿನಗಾರು ಸರಿಯೆಂದ ॥

ಇಂದುಮುಖಿ ದಮಯಂತಿಯೊಡನಾ
ನಂದದಲಿ ನಳನೃಪತಿ ಮಾವನ
ಮಂದಿರದಿ ತಾನೊಂದು ವತ್ಸರವಿದ್ದು ವಿಭವದಲಿ
ಮುಂದೆ ನಮ್ಮಯ ನಿಷಧಪುರಿಗಾ
ವಿಂದು ಗಮಿಸಲು ಬೇಕೆನುತ ತಾ
ನಂದು ಭೀಮನೃಪಾಲನೊಡನಾಲೋಚಿಸಿದ ಹದನ ॥

ನಳನೃಪತಿ ನೀ ಗೆಲಿದೊಡೀ ಭೂ
ಲಲನೆಯನು ತಾ ಬಿಡುವೆ ಸೋತರೆ
ಬಳಿಕ ದಮಯಂತಿಯನು ನನಗೊಪ್ಪಿಸುವುದೆಂದೆನಲು
ಇಳೆಯೊಳಿಹ ಭೂರುಹದ ಹೃದಯದ
ನೆಲೆಯ ಬಲ್ಲಗ್ಗಳಿಕೆಯಲಿ ತಾ
ಗೆಲುವೆನೆಂದೊಪ್ಪಿದನು ಮನದಲಿ ಧೈರ್ಯಪರನಾಗಿ ॥

ಖಿನ್ನನಾದನು ಪುಷ್ಕರನು ಹರು
ಷೋನ್ನತಿಯ ಬೀಳ್ಕೊಡಲು ಗುಣ ಸಂ
ಪನ್ನನೇರಿದ ರತ್ನಸಿಂಹಾಸನವ ನಳನೃಪತಿ
ಪನ್ನಗಾರಿಧ್ವಜನ ಕೃಪೆ ನಿನ
ಗಿನ್ನು ಸಿದ್ಧಿಸಲೆಂದು ಮುನಿಜನ
ರುನ್ನತದಿ ಕೊಂಡಾಡಿ ಹರಸಿದರೆಲ್ಲ ಧರಣಿಪನ ॥

ಎಂದು ಬುದ್ಧಿಯ ಪೇಳಿ ಮುನಿ ಯಮ
ನಂದನನ ಬೀಳ್ಕೊಂಡು ತಾಪಸ
ವೃಂದ ಸಹಿತಲ್ಲಿಂದ ಹೊರವಂಟನು ನಿಜಾಶ್ರಮಕೆ
ಅಂದು ಯಮಳರು ಧೌಮ್ಯ ದ್ರೌಪದಿ
ಸಂದ ಮುನಿಜನ ಸಹಿತ ಯಮಸುತ
ಬಂದು ಹೊಕ್ಕನು ಪರ್ಣಶಾಲೆಯನಧಿಕ ಹರುಷದಲಿ ॥

ಅರಸ ಕೇಳೈ ತನ್ನ ಬಾಂಧವ
ಧರಣಿಪರ ಮಂತ್ರಿಗಳ ಮುನಿಮು
ಖ್ಯರ ಸುಗಾಯಕ ಪಂಡಿತರ ಭೂಸುರರ ಯಾಚಕರ
ಹರುಷ ಮಿಗಲಾದರಿಸಿದನು ಕರಿ
ತುರಗ ವಸ್ತ್ರಾಭರಣದಿಂದುಪ
ಚರಿಸಿ ಭೀಮನೃಪಾಲನವರವರುಗಳ ಬೀಳ್ಕೊಟ್ಟ
ಅಳಿಯನನು ಮನ್ನಿಸುತ ಮಗಳಿಗೆ ॥

ಹೊಳೆವ ಮಣಿಭೂಷಣದ ಪೆಟ್ಟಿಗೆ
ಗಳನು ಗಜ ರಥ ತುರಗ ಪಾದಾತಿಗಳ ಲಲನೆಯರ
ಬಳುವಳಿಯನಿತ್ತವನಿಪತಿ ನಿಜ
ಬಲಸಹಿತ ಮಾಡಿದನು ಪಯಣದ
ನುಲಿವ ಮಂಗಳ ಪಾಠಕರ ಸಂದಣಿಯ ರಭಸದಲಿ ॥

**ಸಂಗ್ರಹ ನೆರವು : ಡಾ. ಸುರೇಶ ನಾಗಲಮಡಿಕ**

# ಹರಿಭಕ್ತಿಸಾರ

'ಹರಿಭಕ್ತಿಸಾರ' ಇದು ಶತಕ ಕಾವ್ಯ. ೧೦೮ ಪದ್ಯಗಳನ್ನು ಒಳಗೊಂಡಿದೆ. ಕನ್ನಡ ಭಕ್ತಿ ಸಾಹಿತ್ಯ ಚರಿತ್ರೆಯಲ್ಲಿ ಇದೊಂದು ಮೇರುಕೃತಿ.

**ಕಾವ್ಯ ಹಿನ್ನೆಲೆ:**

ಮನುಷ್ಯನು ಜನ್ಮವನ್ನು ಸಾರ್ಥಕಪಡಿಸಿಕೊಳ್ಳಬೇಕಾದರೆ ನಾಲ್ಕು ಗುರಿಗಳನ್ನು ಸಾಧಿಸಬೇಕು. ಧರ್ಮ, ಅರ್ಥ, ಕಾಮ, ಮೋಕ್ಷ – ಇವೇ ಆ ನಾಲ್ಕು ಗುರಿಗಳು. ಇವುಗಳಿಗೆ ಪುರುಷಾರ್ಥಗಳೆಂದು ಹೆಸರು. ಪುರುಷನೆಂದರೆ ಇಲ್ಲಿ ಮನುಷ್ಯನೆಂದರ್ಥ. ಮಹಿಳೆಯರಿಗೂ ಇದು ಅನ್ವಯಿಸುತ್ತದೆ.

ಅರ್ಥವೆಂದರೆ ಸುಖಭೋಗಕ್ಕೆ ಬೇಕಾದ ಹಣ ಮುಂತಾದ ವಸ್ತುಗಳು. ಇವುಗಳಿಂದ ಅನುಭವಿಸುವ ಸುಖವೇ ಕಾಮವೆನಿಸುತ್ತದೆ. ಎಲ್ಲರೂ ಸಾಮಾನ್ಯವಾಗಿ ಅರ್ಥ ಕಾಮಗಳಿಗಾಗಿ ಪ್ರಯತ್ನಿಸುತ್ತಲೇ ಇರುತ್ತಾರೆ. ಇದು ಮಾನವ ಪ್ರಕೃತಿಯೇ ಆಗಿದೆ. ಆದರೆ ಇವನ್ನು ಧರ್ಮಮಾರ್ಗದಿಂದಲೇ ಗಳಿಸಬೇಕು. ಧರ್ಮಮಾರ್ಗದಿಂದ ಭೋಗವಸ್ತುಗಳನ್ನು ಸಂಪಾದಿಸಿ ಧರ್ಮಮಾರ್ಗದಿಂದಲೇ ಅವನ್ನು ಭೋಗಿಸಬೇಕು. ಈ ಧರ್ಮ, ಅರ್ಥ, ಕಾಮಗಳಿಗೆ ತ್ರಿವರ್ಗಗಳೆಂದು ಹೆಸರು. ಇವು ಸಾಮಾನ್ಯವಾದ ಪುರುಷಾರ್ಥಗಳು. ಬಹುಶಃ ಎಲ್ಲ ವಿದೇಶೀಯ ದಾರ್ಶನಿಕರ ಚಿಂತನೆಗಳು ಈ ತ್ರಿವರ್ಗದಲ್ಲಿ ಸಮಾಪ್ತವಾಗಬಹುದು. ಭಾರತೀಯರ ಪ್ರಕಾರ ಮೋಕ್ಷವೆಂದು ನಾಲ್ಕನೆಯ ಪುರುಷಾರ್ಥ ಉಂಟು. ಇದೇ ಪರಮೋತ್ತಮವಾದ ಪುರುಷಾರ್ಥ.

ಈ ಮೋಕ್ಷವನ್ನು ಪಡೆಯಲು ಮೂರು ಮಾರ್ಗಗಳಿವೆ. ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ. ಯೋಗವೆಂದರೆ ಮಾರ್ಗೋಪಾಯವೆಂದರ್ಥ. ಮೊದಲು ಕರ್ಮ, ಕರ್ಮದಿಂದ ಭಕ್ತಿ, ಭಕ್ತಿಯಿಂದ ಜ್ಞಾನ – ಇವು ಸೋಪಾನಕ್ರಮದಲ್ಲಿ ಮೋಕ್ಷಕ್ಕೆ ಕಾರಣಗಳು. ಮಧ್ಯಸ್ಥಾನದಲ್ಲಿರುವ ಭಕ್ತಿಯು ಕರ್ಮಮಾರ್ಗಕ್ಕೂ ಬೇಕು, ಜ್ಞಾನಮಾರ್ಗಕ್ಕೂ ಬೇಕು. ಹೀಗೆ ಭಕ್ತಿಯು ಕೊಂಡಿಯಂತೆ ಇದ್ದು ಉಭಯೋಪಕಾರಿಯಾದ್ದರಿಂದ ಯೋಗಗಳಲ್ಲಿ ಭಕ್ತಿಯು ಉತ್ತಮ ಸ್ಥಾನವನ್ನು ಪಡೆಯುತ್ತದೆ. ಭಕ್ತಿಯಿಂದಲೇ ನೇರವಾಗಿ ಮೋಕ್ಷವೆಂದು ಜ್ಞಾನದಿಂದಲೇ ಮೋಕ್ಷವೆಂದೂ ಎರಡು ವಾದಗಳುಂಟು. ಅದು ಹೇಗಾದರೂ ಇರಲಿ ಕನಕದಾಸರ 'ಹರಿಭಕ್ತಿಸಾರ' ಕೃತಿಗೆ ಸಂಬಂಧಿಸಿದಂತೆ ಪ್ರಸ್ತುತವಾದುದು ಭಕ್ತಿ. ಈ ಭಕ್ತಿ ಮತ್ತು ಜ್ಞಾನದಿಂದ ಮೋಕ್ಷವನ್ನು ಅರೆಸುವುದು ಕನಕದಾಸರ ಮಾರ್ಗ.



ಕನಕದಾಸರು ಈ ಗ್ರಂಥಕ್ಕೆ 'ಹರಿಭಕ್ತಿಸಾರ'ವೆಂದು ಹೆಸರಿಸಿದ್ದಾರೆ. ಶ್ರೀಹರಿಯ ವಿವಿಧ ಪ್ರಕಾರಗಳನ್ನು ಸ್ತುತಿಸುವುದು ಈ ಕಾವ್ಯದ ಆಶಯ. ಆದ್ದರಿಂದ ಹರಿಭಕ್ತಿಸಾರವೆಂಬ ಹೆಸರು ಅನ್ವರ್ಥನಾಮವೆನ್ನಬಹುದು. ಆರಂಭದ ಕೆಲವು ಶ್ಲೋಕಗಳಲ್ಲಿ ವಿಷ್ಣುವಿನ ನಾಮಸಂಕೀರ್ತನೆ ಬಂದಿದೆ. ಅನಂತರ ಶ್ರೀರಾಮ, ಶ್ರೀಕೃಷ್ಣಾದ್ಯವತಾರಗಳಲ್ಲಿ ಆತನಿಂದಾದ ಕೆಲವು ಮಹತ್ತರವಾದ ಕಾರ್ಯಗಳನ್ನು ಕಾವ್ಯಶೈಲಿಯಲ್ಲಿ ಕನಕದಾಸರು ಬಣ್ಣಿಸಿದ್ದಾರೆ.

**ಕಾವ್ಯ ದರ್ಶನ:**

ಕನಕದಾಸರು ಬದುಕಿದ ಮಧ್ಯಕಾಲೀನ ಸಂದರ್ಭದಲ್ಲಿ ಭಕ್ತಿಪಂಥ ಪ್ರಬಲಶಾಲಿಯಾಗಿತ್ತು. ವಿಶೇಷವಾಗಿ ವೈಷ್ಣವಭಕ್ತಿ ಏರುಮುಖವಾಗಿತ್ತು. ಇದರ ಪರಿಣಾಮವೆಂದರೆ – ವೈಷ್ಣವ ಭಕ್ತಿ ಕೇಂದ್ರಗಳಾದ ತಿರುಪತಿ, ಶ್ರೀರಂಗ, ಹಂಪಿ, ಮೇಲುಕೋಟೆ, ಉಡುಪಿ, ಬೇಲೂರು ಇವೆಲ್ಲವೂ ಧಾರ್ಮಿಕ ಕಾರ್ಯಾಚರಣೆಯನ್ನು ಒಳಗೊಂಡೇ ರಾಜಕೀಯ ಆರ್ಥಿಕ ಆಯಕಟ್ಟಿನ ಕೇಂದ್ರಗಳಾಗಿದ್ದವು. ಯೋಧತ್ವವನ್ನು ತೊರೆದು ದಾಸತ್ವವನ್ನು ಸ್ವೀಕರಿಸಿದ ಕನಕದಾಸರು ಈ ವೈಷ್ಣವ ಧರ್ಮದ ಪ್ರಭಾವಕ್ಕೆ ಒಳಗಾದರು; ವಿಶೇಷವೆಂದರೆ ಅವರು ಈ ಕೇಂದ್ರಗಳನ್ನು ಸಂದರ್ಶಿಸಿದರೇ ಹೊರತು ಅವುಗಳ ಭಾಗವಾಗಲಿಲ್ಲ; ಅಲ್ಲಿ ಎಲ್ಲಿಯೂ ನೆಲೆ ನಿಲ್ಲಲಿಲ್ಲ. ಜಂಗಮನಂತೆ ಸುತ್ತಿದರು. ಜನಸಾಮಾನ್ಯರ ಒಡನಾಡಿಯಾಗಿ ಉಳಿದರು. ಇದರ ಪರಿಣಾಮವೆಂದರೆ ಅವರು ಉಳಿದ ಭಕ್ತರಂತೆ ಭಗವಂತನಿಗೆ ಎಲ್ಲವನ್ನೂ ಅರ್ಪಿಸಿಕೊಂಡು ಮನಸ್ಸನ್ನು ನಿಗ್ರಹಿಸಿಕೊಂಡು ಆತ್ಮನಿವೇದನೆಯ ಹಂತಕ್ಕಷ್ಟೇ ನಿಲ್ಲಲಿಲ್ಲ. ಈ ಭಕ್ತಿಯನ್ನು ಸಾಮಾಜಿಕೀಕರಣಗೊಳಿಸಿದ ಹಿರಿಮೆ ಇವರದು. ಅಂದರೆ ಭಕ್ತಿಯನ್ನು ಕೇವಲ ಪಾರಾಯಣ ಮಾಡುವುದಕ್ಕೆ ಬಳಸಿಕೊಳ್ಳದೆ ಜ್ಞಾನೋಪಾಸನೆಗೆ, ಸಮಾಜ ಸುಧಾರಣೆಗೆ ಜನಪರವಾಗಿ ಬಳಸಿಕೊಂಡರು. ಹರಿಭಕ್ತಿಸಾರದಂಥ ಅಪ್ಪಟ ಭಕ್ತಿಕಾವ್ಯದಲ್ಲಿಯೂ ಸಹ ಈ ಅಂಶಗಳನ್ನು ಗುರುತಿಸಬಹುದು.

ಈ ಕಾವ್ಯದ ವಿಶೇಷವೆಂದರೆ ಕನಕದಾಸರು ನಿರಂಕಾರಿ ಆತ್ಮವನ್ನು ನೆಪವಾಗಿಸಿಕೊಂಡು ಭವವಾದಿಗಳ ಲೌಕಿಕ ಸಂಗತಿಗಳನ್ನು ತೆರೆದಿಡುತ್ತಾರೆ. ಉದಾಹರಣೆಗೆ ಕಾವ್ಯದ ಪ್ರತಿಪದ್ಯದ ಅಂತ್ಯದಲ್ಲಿಯೂ "ರಕ್ಷಿಸು ನಮ್ಮನನವರತ" ಎಂದು ತನ್ನ ಆರಾಧ್ಯದೈವದ ಮುಂದಿಡುವ ಈ ಬೇಡಿಕೆಯು ಸಮುದಾಯದ ಒಳಿತನ್ನು ಬಯಸುತ್ತದೆ. ವೈಯಕ್ತಿಕ ಹಿತಾಸಕ್ತಿಯನ್ನು ನಿರಾಕರಿಸುತ್ತದೆ. ಅಂದರೆ ಸಮುದಾಯದ ಘಟಕವೇ ಆಗಿರುವ ಈ ದೇಹದ ಪ್ರೀತಿಯನ್ನು ಈ ಬೇಡಿಕೆ

ಧ್ವನಿಸುತ್ತದೆ. ಅಂದರೆ ಕನಕದಾಸರ ಈ ಭಕ್ತಿಯ ಅಂತಿಮ ಮೊರೆ ಎಂದರೆ ನಶ್ವರವಲ್ಲದ, ಶಾಶ್ವತವಾದ, ಮಿತಿಗಳಿಲ್ಲದ ಚಿರವಾದ ದೇಹದ ಬಯಕೆಯೇ ಆಗಿರುತ್ತದೆ. ಇದನ್ನು ನಿಸರ್ಗದ ವಿವೇಕ ಎಂದರೂ ಸರಿಯೆ!

**ವಿಶ್ಲೇಷಣೆಗಾಗಿ ಈ ಪದ್ಯವನ್ನು ಗಮನಿಸಬಹುದು:**

ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣು ಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ।
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಗೂಡಿಸಬೇಡ ಜ್ಞಾನದ
ಕಣ್ಣ ದೃಷ್ಟಿಯನ್ನಿಟ್ಟು ರಕ್ಷಿಸು ನಮ್ಮನನವರತ ॥

– ಇಲ್ಲಿ 'ಮಣ್ಣಿನಲಿ ಬಂಧಿಸಿದ ದೇಹವ ಮಣ್ಣುಗೂಡಿಸಬೇಡ' ಎಂಬುವುದಷ್ಟೇ ವಿಚಾರವಾಗಿದ್ದರೆ ಅದು ಕರ್ಮಸಿದ್ಧಾಂತದ ಪ್ರತಿಪಾದನೆ ಅನಿಸುತ್ತಿತ್ತು. ಆದರೆ ಈ ಪದ್ಯದ ವಿಶೇಷವಿರುವುದು **'ಕಾವ'** ಮಣ್ಣಿನ ಗುಣವನ್ನು ವಿವರಿಸುತ್ತಾ, ಕೊನೆಗೆ ದೇಹವನ್ನು ಮಣ್ಣುಗೂಡಿಸದೆ ಜ್ಞಾನದ ಕಣ್ಣದೃಷ್ಟಿಯನ್ನಿಟ್ಟು ರಕ್ಷಿಸು ನಮ್ಮನ್ನು' ಎಂದು ಹೇಳುವಲ್ಲಿ ಕನಕದಾಸರ ಭಕ್ತಿಯು ಸಾಮುದಾಯಿಕವಾದ ಜೀವಪರದತ್ತ ಚಾಚುವ **'ದಾಟ'**ನ್ನು ಗ್ರಹಿಸಬಹುದು.

ಈ ದೇಹರಚನೆ, ಅದಕ್ಕಿರುವ ಆತಂಕ, ಅದರಿಂದ ರಕ್ಷಣೆ, ಅದರೊಳಗೆ ಕಾಯುವ ದೈವ ಇರುವ ಬಗೆಯನ್ನು ಮತ್ತು ಆ ಕಾರಣಕ್ಕೆ ಆ ದೈವಕ್ಕಿರುವ ಜವಾಬ್ದಾರಿಯನ್ನು ನೆನಪಿಸುವಂತಿರುವ ಈ ಪದ್ಯವನ್ನು ಗಮನಿಸಿ:

ವಾರಣಗಳೆಂಟೆಸೆವ ಮನೆಗೆ
ದ್ವಾರವೊಂಭತ್ತದಕೆ ಬಲು ಮೊನೆ
ಗಾರರಾದಾಳುಗಳ ಕಾವಲುಗಾರರನು ಮಾಡಿ ।
ಆರರಿಯದಂತದರೊಳಗೆ ಹೃದ
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ॥

ಒಟ್ಟಾರೆ, ಕನ್ನಡ ಸಾಹಿತ್ಯದಲ್ಲಿ ಭಕ್ತಿಸಾಹಿತ್ಯ ಪ್ರಕಾರದ ಶ್ರೇಷ್ಠ ಕಾವ್ಯವೆಂದು ಕವಿಚರಿತೆಕಾರರು



ಗುರುತಿಸಿರುವ 'ಹರಿಭಕ್ತಿಸಾರ'ವನ್ನು ಯುವ ಸಮುದಾಯ ಯಾಕೆ ಓದಬೇಕು? ಹೇಗೆ ಗ್ರಹಿಸಬೇಕು? ಯಾವ ದೃಷ್ಟಿಕೋನಗಳಿಂದ ವಿಶ್ಲೇಷಿಸಿಕೊಳ್ಳಲು ಈ ಕಾವ್ಯ ಆಯಾಮಗಳನ್ನೊದಗಿಸುತ್ತದೆ ಈ ಮುಂತಾದ ನೆಲೆಯಲ್ಲಿ 'ಓದು'ವ ಕ್ರಮಕ್ಕೆ ಈ ಟಿಪ್ಪಣಿ ಒಂದು ತೋರುಬೆರಳೇ ಹೊರತು ದಿಗ್ದರ್ಶನವಲ್ಲ ಎಂಬುದನ್ನು ನೆನಪಿಸುತ್ತಾ ಪಠ್ಯಭಾಗದ ಓದುಗೆ ನಿಮ್ಮನ್ನು ಆಹ್ವಾನಿಸಲಾಗುತ್ತಿದೆ:

**ಕಾವ್ಯ ಪಠ್ಯದ ಆಯ್ದ ಭಾಗ:**

ಭಕ್ತಿಸಾರದ ಚರಿತೆಯನು ಹರಿ
ಭಕ್ತರಾಲಿಸುವಂತೆ ರಚಿಸುವೆ
ಯುಕ್ತಿಯಲಿ ಬರೆದೋದಿದವರಿಷ್ಟಾರ್ಥ ಸಿದ್ಧಿಪುದು ।
ಮುಕ್ತಿಗಿದು ನೆಲೆದೋರುವುದು ಹರಿ
ಭಕ್ತರಿದನಾಲಿಪುದು ಜಿನಮತಿ
ಭಕ್ತಿಗೊಲಿವಂದದಲಿ ರಕ್ಷಿಸು ನಮ್ಮನನವರತ ॥

ನಳಿನಲೋಚನ ನಿನ್ನ ಮೂರ್ತಿಯ
ಕಳೆ ಬೆಳಗುತಿದೆ ಲಹರಿಯಲಿ ಭೂ
ತಳದೊಳಚ್ಚರಿಯಾದ ನಾಮಾಮೃತ ಸಮುದ್ರದಲಿ ।
ಬಳಸುವರು ಸತ್ಕವಿಗಳವರ
ಗ್ಗಳಿಕೆಯೆನಗಿನಿತಿಲ್ಲ ಸನ್ಮತಿ
ಗಳಿಗೆ ಮಂಗಳವಿತ್ತು ರಕ್ಷಿಸು ನಮ್ಮನನವರತ ॥

ಗಿಳಿಯ ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ, ಕೇಳ್ವ ಪರಿಣತರಂತೆ ನೀನೆನಗೆ ।
ತಿಳುಹು ಮತಿಯನು ಎನ್ನ ಜಿಹ್ವೆಗೆ
ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ ॥

ವೇದ ಶಾಸ್ತ್ರ ಪುರಾಣ ಪುಣ್ಯದ
ಹಾದಿಯನು ನಾನರಿಯೆ ತರ್ಕದ
ವಾದದಲಿ ಗುರುಹಿರಿಯರರಿಯದ ಮೂಢಮತಿಯೆನಗೆ ।

ಆದಿಮೂರುತಿ ನೀನು ನೆರೆ ಕರು
ಣೋದಯನು ಹೃದಯಾಂಗಣದಿ ಜ್ಞಾ
ನೋದಯವನೆನಗಿತ್ತು ರಕ್ಷಿಸು ನಮ್ಮನನವರತ ॥

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನ ಬಲ್ಲೆನು ನಾನು ನೆರೆ ಸು
ಜ್ಞಾನಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ ॥

ಸ್ನಾನ ಸಂಧ್ಯಾ ಧ್ಯಾನ ಜಪ ತಪ
ದಾನ ಧರ್ಮ ಪರೋಪಕಾರ ವಿ
ಹೀನ ಕರ್ಮದೊಳಿರುವೆನಲ್ಲದೆ ಬೇರೆ ಗತಿಯುಂಟೆ ।
ಏನು ಮಾಡಿದಡೇನು ಮುಕ್ತಿ
ಜ್ಞಾನವಿಲ್ಲದಡಿಲ್ಲ ಭಕ್ತಿಗೆ
ನೀನೆ ಕಾರಣನಾಗಿ ರಕ್ಷಿಸು ನಮ್ಮನನವರತ ॥

ಬೀಜ ವೃಕ್ಷದೊಳಾಯ್ತು ವೃಕ್ಷಕೆ
ಬೀಜವ್ಯಾರಿಂದಾಯ್ತು ಲೋಕದಿ
ಬೀಜವೃಕ್ಷನ್ಯಾಯವಿದ ಭೇದಿಸುವರ್‍ಯಾರಿನ್ನು ।
ಸೋಜಿಗವ ನೀ ಬಲ್ಲೆ ನಿನ್ನೊಳು
ರಾಜಿಸುತ ಮೊಳೆದೋರುವುದು ಸುರ
ರಾಜನಂದನ ನಮಿತ ರಕ್ಷಿಸು ನಮ್ಮನನವರತ ॥

ಮಣ್ಣು ಮಣ್ಣಿನೊಳುದಿಸಲದರಲಿ
ಮಣ್ಣು ಬೊಂಬೆಗಳಾಗಿ ರಂಜಿಸಿ
ಮಣ್ಣಿನಾಹಾರದಲಿ ಜೀವವ ಹೊರೆದು ಉಪಚರಿಸಿ ।
ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಗೂಡಿಸಬೇಡ ಜ್ಞಾನದ
ಕಣ್ಣ ದೃಷ್ಟಿಯನಿಟ್ಟು ರಕ್ಷಿಸು ನಮ್ಮನನವರತ ॥



ಹಸಿವರಿತು ತಾಯ್ ತನ್ನ ಶಿಶುವಿಗೆ
ಒಸೆದು ಮೊಲೆ ಕೊಡುವಂತೆ ನೀ ಪೋ
ಷಿಸದೆ ಬೇರಿನ್ನಾರು ಪೋಷಕರಾಗಿ ಸಲಹುವರು ।
ಬಸಿರೊಳಗೆ ಬ್ರಹ್ಮಾಂಡಕೋಟಿಯ
ಪಸರಿಸಿದ ಪರಮಾತ್ಮ ನೀನೆಂ
ದುಸಿರುತಿವೆ ವೇದಗಳು ರಕ್ಷಿಸು ನಮ್ಮನನವರತ ॥

ಇಳೆಗೆ ಪತಿಯಾದವನು ಯಾದವ
ರೊಳಗೆ ಬಾಂಧವ ನಿನಗೆ ಸೋದರ
ದಳಿಯನಾದಭಿಮನ್ಯುವನು ಕೊಲ್ಲಿಸಿದೆ ಕೊಳುಗುಳದಿ ।
ಅಳಲಿನಬುಧಿಯೊಳದ್ದಿ ತಂಗಿಯ
ಬಳಲಿಸಿದೆ ಕುಲಗೋತ್ರ ಬಾಂಧವ
ರೊಳಗೆ ಕೀರ್ತಿಯ ಪಡೆದೆ ರಕ್ಷಿಸು ನಮ್ಮನನವರತ ॥

ತಾಯನಗಲಿದ ತನಯನೀ ರಾ
ಧೇಯನೊಳಗೆ ರಹಸ್ಯದಲಿ ಕುಲ
ದಾಯವನು ನೆರೆ ತಿಳುಹಿ ಅರ್ಜುನನಿಂದ ಕೊಲ್ಲಿಸಿದೆ ।
ಮಾಯಮಂತ್ರದ ಕುಟಿಲಗುಣದ
ನ್ಯಾಯವೊ ಇದು ನ್ಯಾಯವೋ ನಿ
ನ್ನಾಯವನು ನೀ ಬಲ್ಲೆ ರಕ್ಷಿಸು ನಮ್ಮನನವರತ ॥

ಮಗನ ಕೊಂದವನಾಳುವಂತಾ
ಸುಗುಣೆಯರು ಹದಿನಾರು ಸಾವಿರ
ಸೊಗಸುಗಾತಿಯರವರ ಮೋಹದ ಬಲೆಗೆ ವಿಟನಾಗಿ ।
ಬಗೆಬಗೆಯ ರತಿಕಲೆಗಳಲಿ ಕೂ
ರುಗರ ನಾಟಿಸಿ ಮೆರೆದು ನೀನೀ
ಜಗಕೆ ಪಾವನನಾದೆ ರಕ್ಷಿಸು ನಮ್ಮನನವರತ ॥

ಹೆತ್ತ ಮಗಳನು ಮದುವೆಯಾದವ
ನುತ್ತಮನು ಗುರುಪತ್ನಿಗಳುಪಿದ
ಚಿತ್ತಜನು ಮಾವನ ಕೃತಘ್ನನು ನಿನಗೆ ಮೈದುನನು ।

ಹೊತ್ತು ತಪ್ಪಿಸಿ ಕಾಮದಲಿ ಮುನಿ
ಪೋತ್ತಮನ ಮಡದಿಯನು ನೆರೆದವ
ಗಿತ್ತೆ ಕೈವಲ್ಯವನು ರಕ್ಷಿಸು ನಮ್ಮನನವರತ ॥

ಬಲು ಮೃಗವು ಮರ ಪಕ್ಷಿ ಕೀಟಕ
ಜಲಚರೌಘದಿ ಜನಿಸಿದೆನು ಕೋ
ಟಲೆಗೊಳಿಸಬೇಡಕಟ ಮಾನವನಾದ ಬಳಿಕಿನ್ನು ।
ಕೊಲಿಸದಿರು ಯಮನಿಂದ ಮುರಹರ
ಒಲಿದು ನಿನ್ನನು ಭಜಿಸುವವರಿಗೆ
ಕೊಲೆಗೆ ಕಾರಣವೇನು ರಕ್ಷಿಸು ನಮ್ಮನನವರತ ॥

ಕಾಪುರುಷರೈದಾರು ಮಂದಿ ಸ
ಮೀಪದಲಿ ಕಾಡುವರು ಎನ್ನನು
ನೀ ಪರಾಮರಿಸದೆ ಪರಾಕಾಗಿಹುದು ಲೇಸಲ್ಲ ।
ಶ್ರೀ ಪದಾಬ್ಜದ ಸೇವೆಯಲಿ ನೆರೆ
ಪಾಪವನು ಪರಿಹರಿಸೆ ನೀ ನಿಜ
ರೂಪಿನಲಿ ಬಂದೊಲಿದು ರಕ್ಷಿಸು ನಮ್ಮನನವರತ ॥

ಕೇಳುವುದು ಕಡುಕಷ್ಟ ಕಷ್ಟದ
ಬಾಳುವೆಯ ಬದುಕೇನು ಸುಡು ಸುಡು
ಗಾಳಿಗೊಡ್ಡಿದ ಸೊಡರು ಈ ಸಂಸಾರದೇಳಿಗೆಯು ।
ಬಾಳಬೇಕೆಂಬವಗೆ ನೆರೆ ನಿ
ನ್ನೊಳಿಗವ ಮಿಗೆಮಾಡಿ ಭಕ್ತಿಯೊ
ಳಾಳಿ ಬದುಕುವುದುಚಿತ ರಕ್ಷಿಸು ನಮ್ಮನನವರತ ॥

ಸಾರವಿಲ್ಲದ ದೇಹವಿದು ನಿ
ಸ್ಸಾರವಾಗಿಹ ತನುವಿನಲಿ ಸಂ
ಚಾರಿಯಹ ನೀನಿರ್ದು ಕಡೆಯಲಿ ತೊಲಗಿಹೋಗುತಲಿ ।
ದೂರ ತಪ್ಪಿಸಿಕೊಂಡು ಬರಿಯಪ
ದೂರ ಹೊರಿಸಿದೆ ಜೀವನಲಿ ಇದ
ನಾರು ಮೆಚ್ಚುವರಕಟ ರಕ್ಷಿಸು ನಮ್ಮನನವರತ ॥

ಎಂಟು ಗೇಣಿನ ದೇಹ ರೋಮಗ
ಳೆಂಟು ಕೋಟಿಯ ಕೀಲ್ಗಳಿರುವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯ ಮನವೊಲಿದು ।
ನೆಂಟ ನೀನಿರ್ದಗಲಿದಡೆ ಒಣ
ಹೆಂಟಿಯಲಿ ಮುಚ್ಚುವರು ದೇಹದ
ಲುಂಟೆ ಫಲ ಪುರುಷಾರ್ಥ ರಕ್ಷಿಸು ನಮ್ಮನನವರತ ॥

ಪಂಟಿಸಿದ ಮದಮುಖರು ಕೆಲಕೆಲ
ರುಂಟು ರಿಪುಗಳು ದಂಟಿಸುತ ಬಲು
ಕಂಟಕದಿ ಕಾಡುವರು ಕಾಯ್ಯೆ ಕಲುಷ ಸಂಹಾರ ।
ಬಂಟನಲ್ಲವೆ ನಾನು ದೀನರ
ನಂಟನಲ್ಲವೆ ನೀನು ನಿನ್ನೊಳ
ಗುಂಟೆ ನಿರ್ದಯ ನೋಡಿ ರಕ್ಷಿಸು ನಮ್ಮನನವರತ ॥

ವರುಷ ನೂರಾಯುಷ್ಯವದರೊಳ
ಗಿರುಳು ಕಳೆದೈವತ್ತು ಐವ
ತ್ತರಲಿ ವಾರ್ಧಿಕ ಬಾಲ್ಯ ಕೌಮಾರದಲಿ ಮೂವತ್ತು ।
ಇರದೆ ಸಂದುದು ಬಳಿಕವಿಪ್ಪತು
ವರುಷವದರೊಳಗಾದುದಂತಃ
ಕರಣ ನಿನ್ನೊಳು ತೋರಿ ರಕ್ಷಿಸು ನಮ್ಮನನವರತ ॥

ಊರು ತನಗೊಂದಿಲ್ಲ ಹೊತ್ತ ಶ
ರೀರಗಳ ಮಿತಿಯಿಲ್ಲ ತಾ ಸಂ
ಚಾರಿಸದ ಸ್ಥಳವಿಲ್ಲ ನುಡಿಯದ ಭಾಷೆ ಮತ್ತಿಲ್ಲ ।
ಬೇರೆ ಹೊಸತೊಂದಿಲ್ಲ ಉಣ್ಣದ
ಸಾರ ವಸ್ತುಗಳಿಲ್ಲ ತನುಸಂ
ಚಾರವೀ ಬಗೆಯಾಯ್ತು ರಕ್ಷಿಸು ನಮ್ಮನನವರತ ॥

ಗೋಪುರದ ಭಾರವನು ಗಾರೆಯ
ರೂಪುದೋರಿದ ಪ್ರತಿಮೆಯಂದದೊ
ಳೀ ಪರಿಯೆ ಸಂಸಾರಭಾರವನಾರು ತಾಳುವರು ।

ತಾ ಪರಾಕ್ರಮಿಯೆಂದು ಮನುಜನು
ಕಾಪಥವನಯ್ದುವನು ವಿಶ್ವ
ವ್ಯಾಪಕನು ನೀನಹುದು ರಕ್ಷಿಸು ನಮ್ಮನನವರತ ॥

ತೊಲಗುವರು ಕಡೆಗಡೆಗೆ ತಾ ಹೊಲೆ
ಹೊಲೆಯೆನುತ ಕಳವಳಿಸಿ ಮೂತ್ರದ
ಬಿಲದೊಳಗೆ ಬಂದಿಹುದು ಕಾಣದೆ ಬರಿದೆ ಮನನೊಂದು ।
ಜಲದೊಳಗೆ ಮುಳುಗಿದರೆ ತೊಲಗದು
ಹೊಲೆಗೆಲಸವೀ ದೇಹದೊಳು ನೀ
ನೆಲಸಿರಲು ಹೊಲೆಯುಂಟೆ ರಕ್ಷಿಸು ನಮ್ಮನನವರತ ॥

ಎಂಜಲೆಂಜಲು ಎಂಬರಾ ನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನಿಸಿರದೆ ।
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ ॥

ನಾಲಿಗೆಯು ನಾಸಿಕವು ನಯನ ಕ
ಪಾಲ ಪದ ಪಾಣಿಗಳು ತನುವಿನ
ಮೂಲಕತ್ಯವಿನಲ್ಲಿ ಪರಿಚಾರಕರು ತಾವಾಗಿ ।
ಲೀಲೆಯಿಂದಿರುತಿರ್ದು ಕಡೆಯಲಿ
ಕಾಲ ತೀರಿದ ಬಳಿಕಲದರನು
ಕೂಲ ನಿನ್ನೊಳಗಹುದು ರಕ್ಷಿಸು ನಮ್ಮನನವರತ ॥

ಹೂಡಿದೆಲು ಮರಮುಟ್ಟು ಮಾಂಸದ
ಗೋಡೆ ಚರ್ಮದ ಹೊದಿಕೆ ನರವಿನ
ಕೂಡೆ ಹಿಂಡಿಗೆ ಬಿಗಿದ ಮನೆಯೊಳಗಾತ್ಮ ನೀನಿರಲು ।
ಬೀಡು ತೊಲಗಿದ ಬಳಿಕಲಾ ಸುಡು
ಗಾಡಿನಲಿ ಬೆಂದುರಿವ ಕೊಂಪೆಯ
ನೋಡಿ ನಂಬಿರಬಹುದೆ ರಕ್ಷಿಸು ನಮ್ಮನನವರತ ॥

ಬೀಗಮುದ್ರೆಗಳಿಲ್ಲದೂರಿಗೆ
ಬಾಗಿಲುಗಳೊಂಬತ್ತು ಹಗಲಿರು
ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ ।
ನೀಗಿಯೆಲ್ಲವ ಬಿಸುಟು ಬೇಗದಿ
ಹೋಗುತಿಹ ಸಮಯದಲಿ ಇವರವ
ರಾಗಬಲ್ಲರೆ ನೀನೆ ರಕ್ಷಿಸು ನಮ್ಮನನವರತ ॥

ವಾರಣಗಳೆಂಟೆಸೆವ ಮನೆಗೆ
ದ್ವಾರವೊಂಬತ್ತದಕೆ ಬಲು ಮೊನೆ
ಗಾರರಾದಾಳುಗಳ ಕಾವಲುಗಾರರನು ಮಾಡಿ ।
ಆರರಿಯದಂತದರೊಳಗೆ ಹೃದ
ಯಾರವಿಂದದಿ ನೀನಿರಲು ಬರಿ
ದೂರು ಜೀವನಿಗುಂಟೆ ರಕ್ಷಿಸು ನಮ್ಮನನವರತ ॥

ಲೋಕದೊಳಗತ್ಯಧಿಕನೆನಿಸುವ
ಕಾಗಿನೆಲೆ ಸಿರಿಯಾದಿಕೇಶವ
ತಾ ಕೃಪೆಯೊಳಗೆ ನುಡಿಸಿದನು ಈ ಭಕ್ತಿಸಾರವನು ।
ಜೋಕೆಯಲಿ ಬರೆದೋದಿ ಕೇಳ್ದರ
ನಾಕುಲದಿ ಮಾಧವನು ಕರುಣಿಪ
ಶ್ರೀಕಮಲವಲ್ಲಭನು ಮಿಗೆ ಬಿಡದಾದಿಕೇಶವನು ॥

**ಸಂಗ್ರಹ ನೆರವು: ಕಾ.ತ.ಚಿಕ್ಕಣ್ಣ**

# ರಾಮಧಾನ್ಯ ಚರಿತ್ರೆ

ರಾಮಧಾನ್ಯ ಚರಿತ್ರೆಯು ಭಾಮಿನಿ ಷಟ್ಪದಿ ಕಾವ್ಯ. ೧೫೮ ಪದ್ಯಗಳನ್ನೊಳಗೊಂಡ ಈ ಪುಟ್ಟ ಕಾವ್ಯವನ್ನು ಸಾಹಿತ್ಯ ಲೋಕವು ವಿಡಂಬನಾತ್ಮಕವಾದ ಖಂಡ ಕಾವ್ಯವೆಂದು ಪರಿಗಣಿಸಿದೆ.

**ಕಾವ್ಯ ಹಿನ್ನೆಲೆ:**

ವನವಾಸದಲ್ಲಿದ್ದ ಪಾಂಡವರಿಗೆ ಶಾಂಡಿಲ್ಯ ಮುನಿಯು ಕಥೆ ಹೇಳುವ ಮುಖೇನ ಕಾವ್ಯವು ಪ್ರಾರಂಭವಾಗುತ್ತದೆ. ಶ್ರೀರಾಮಚಂದ್ರನು ವನವಾಸವನ್ನು ಮುಗಿಸಿ ರಾವಣ ಸಂಹಾರ ಮಾಡಿ ವಿಜಯಿಯಾಗಿ ಅಯೋಧ್ಯೆಗೆ ವಾಪಸ್ಸಾಗುವಾಗ ಋಷಿಮುನಿಗಳ ಆಶ್ರಮದಲ್ಲಿ ವಿಶ್ರಾಂತಿ ಹೊಂದುತ್ತಾನೆ. ಆಗ ಗೌತಮಮುನಿಗಳು ಶ್ರೀರಾಮಚಂದ್ರ ಮತ್ತು ಅವನ ಪರಿವಾರಕ್ಕೆ ನಾನಾ ವಿಧದ ಧಾನ್ಯಗಳಿಂದ ತಯಾರಿಸಿದ ಭಕ್ಷ್ಯಭೋಜ್ಯಗಳನ್ನು ಉಣಬಡಿಸುತ್ತಾರೆ. ಉಂಡ ನಂತರ ಈ ಭಕ್ಷ್ಯಭೋಜ್ಯಗಳಿಗೆ ಬಳಸಿದ ಧಾನ್ಯಗಳಲ್ಲಿ ಯಾವುದು ಶ್ರೇಷ್ಠ ಎಂದು ಪ್ರಶ್ನೆ ಉದ್ಭವಿಸುತ್ತದೆ. ಆಗ ರಾಗಿ ಉತ್ತಮ ಎಂಬ ಅಭಿಪ್ರಾಯವನ್ನು ಗೌತಮಮುನಿ ವ್ಯಕ್ತ ಮಾಡುತ್ತಾರೆ. ಅಲ್ಲಿದ್ದ ಬತ್ತಕ್ಕೆ ವಿಪರೀತ ಸಿಟ್ಟು ಬಂದು ಕನಿಷ್ಠವಾದ ರಾಗಿಯನ್ನು ಶ್ರೇಷ್ಠವೆಂದು ಕರೆದ ಗೌತಮಮುನಿಗೆ ಛೀಮಾರಿ ಹಾಕಿ ರಾಗಿಯ ಸ್ಥಾನಮಾನ ಮತ್ತು ಉಪಯೋಗವನ್ನು, ಅದರ ವ್ಯಕ್ತಿತ್ವವನ್ನು ಖಂಡಿಸಿ ಹೀಯಾಳಿಸುತ್ತದೆ. ಬತ್ತದ ಮೂದಲಿಕೆಯನ್ನು ಪ್ರತಿಭಟಿಸಿ ರಾಗಿಯು ಸಹ ತನ್ನ ತನ, ತನ್ನ ಉಪಯೋಗ, ತನ್ನ ಅಸ್ತಿತ್ವವನ್ನು ಅಷ್ಟೇ ತೀವ್ರವಾಗಿ ಮನವರಿಕೆ ಮಾಡಿಕೊಡುತ್ತ ಬತ್ತದ ಭಂಡತನವನ್ನು ಖಂಡಿಸಿ ಪ್ರತ್ಯುತ್ತರ ನೀಡುತ್ತದೆ. ಈ ಎರಡರ ವಾದ ವಿವಾದಗಳನ್ನು ಆಲಿಸಿದ ಶ್ರೀರಾಮಚಂದ್ರನು ಎರಡು ಧಾನ್ಯಗಳನ್ನು ಸೆರೆವಾಸದಲ್ಲಿರಿಸಿ ಆರು ತಿಂಗಳ ನಂತರ ಇಬ್ಬರನ್ನು ಕರೆಸಿ ಶ್ರೇಷ್ಠತೆಯನ್ನು ತೀರ್ಮಾನಿಸುವುದಾಗಿ ಹೇಳಿ ಅಯೋಧ್ಯೆಗೆ ಹೊರಡುತ್ತಾನೆ.

ಅಯೋಧ್ಯೆಯಲ್ಲಿ ಶ್ರೀರಾಮಚಂದ್ರನು ದೇವಾಧಿದೇವತೆಗಳು, ಋಷಿಮುನಿಗಳು ಸೇರಿದ ಸಭೆಯಲ್ಲಿ ಬತ್ತ, ರಾಗಿಯನ್ನು ಕರೆಸಿ ಪರಿಶೀಲಿಸಲಾಗಿ ಬತ್ತ ಜೊಳ್ಳು ಹಿಡಿದು ಕುಗ್ಗಿರುತ್ತದೆ. ರಾಗಿ ಎಂದಿನಂತೆಯೇ ಗಟ್ಟಿಮುಟ್ಟಾಗಿರುತ್ತದೆ. ಆಗ ನಾರದ ಹಾಗೂ ಇತರೆ ದೇವಮುನಿಗಳು ರಾಗಿಯ ಹಿರಿಮೆಯನ್ನು ಎತ್ತಿ ಹಿಡಿಯುತ್ತಾರೆ.



ಶ್ರೀರಾಮಚಂದ್ರನು ರಾಗಿಯ ಹಿರಿಮೆಯನ್ನು ಮಾನ್ಯ ಮಾಡಿ ತನ್ನ ಹೆಸರನ್ನೇ ರಾಗಿಗೆ ಅಭಿದಾನಿಸುತ್ತಾನೆ.

**ಕಾವ್ಯ ದರ್ಶನ:**

ರಾಮಧಾನ್ಯ ಚರಿತ್ರೆಯ ಹಿರಿಮೆ ಎಂದರೆ ಸಾಹಿತ್ಯ ಚರಿತ್ರೆಯಲ್ಲಿಯೇ ಮೊಟ್ಟ ಮೊದಲಿಗೆ ಮೇಲ್ವರ್ಗ ಕೆಳವರ್ಗ ಎಂಬ ಎರಡು ಸಾಮಾಜಿಕ ಕಲ್ಪನೆಯನ್ನು ಎದುರಿರಿಸಿಕೊಂಡು ರಾಗಿ ಮತ್ತು ಬತ್ತದ ಎರಡು ಪಾತ್ರಗಳನ್ನು ಸೃಷ್ಟಿಸಿ ಅನ್ಯೋಕ್ತಿಯ ಮೂಲಕ ರೂಪಕ ಚಿತ್ರವನ್ನು ಕಟ್ಟಿಕೊಡುವುದು.

ಶ್ರೀರಾಮಚಂದ್ರನು ತ್ರೇತಾಯುಗದವನು. ಈ ಕಥೆಯನ್ನು ದ್ವಾಪರಯುಗದಲ್ಲಿ ಶಾಂಡಿಲ್ಯ ಮುನಿ ಪಾಂಡವರಿಗೆ ಹೇಳುವುದು. ಈ ಕಥೆಗೆ ಸಮಕಾಲೀನ ಇತಿಹಾಸವನ್ನು ಅರ್ಥಾತ್ ಜನಪದವನ್ನು ಕವಿ ಸಮೀಕರಿಸುವುದು. ಅಂದರೆ ಪುರಾಣ, ಚರಿತ್ರೆ ಮತ್ತು ಸಮಕಾಲೀನತೆಯೊಂದಿಗೆ ಏಕಕಾಲದಲ್ಲಿ ಸಂವೇದಿಸುವ ಕವಿಯ ಚಮತ್ಕಾರ ಒಂದು ವಿಶೇಷ.

ಸಮಾಜದಲ್ಲಿ ಮೇಲ್ವರ್ಗ ಎಂದುಕೊಂಡವರ ನಿರಂತರ ದಬ್ಬಾಳಿಕೆ, ಪ್ರತಿಷ್ಠೆ ಮತ್ತು ಶೋಷಣೆಗೆ ತಳವರ್ಗವೆಂದು ಪರಿಗಣಿಸಲ್ಪಟ್ಟ ಬಹುಸಂಖ್ಯಾತ ಸಮುದಾಯವನ್ನು, ಅವರ ಶಕ್ತಿ ಸಾಮರ್ಥ್ಯ ಮತ್ತು ಕ್ರಿಯಾಶೀಲತೆಗೆ ಮನ್ನಣೆ ನೀಡದೆ ಕನಿಷ್ಠವೆಂದು ಕರೆದು ದೂರದಲ್ಲಿಟ್ಟೇ ದುಡಿಸಿಕೊಳ್ಳುವ ಪ್ರವೃತ್ತಿ ಸಲ್ಲದು; ಅವರಿಗೆ ಶಕ್ತಿ, ಸಾಮರ್ಥ್ಯವಿದೆ; ಶ್ರಮ ಸಂಸ್ಕೃತಿಯ ಮುನ್ನಲೆಯ ಜನ ಇವರು; ಇವರಿಗೆ ಸೂಕ್ತ ಅವಕಾಶ ಸಿಕ್ಕರೆ ಅವರಿಗೂ ತಕ್ಕ ಪ್ರತಿಭೆ, ಸಾಮರ್ಥ್ಯ ವ್ಯಕ್ತಪಡಿಸಲು ಸಾಧ್ಯವಾಗುತ್ತದೆ ಎಂಬುದು ಕಾವ್ಯದ ಇಂಗಿತಾರ್ಥ. ಈ ತಳಸಮುದಾಯದಿಂದ ಬಂದ ಕವಿಕನಕದಾಸರು ಆ ಸಮುದಾಯಕ್ಕೆ ಆತ್ಮವಿಶ್ವಾಸವನ್ನು, ಆತ್ಮಾಭಿಮಾನವನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ರಾಗಿಯ ಪಾತ್ರ, ಪೋಷಣೆ ಇದೆ. ಇದು ಕಾವ್ಯ ಪ್ರತಿಪಾದಿಸುವ ನಿಸರ್ಗ ವಿವೇಕ.

ಕನ್ನಡ ಸಾಹಿತ್ಯ ಚರಿತ್ರೆಯ ಮೀಮಾಂಸಕರು ರಾಮಧಾನ್ಯ ಚರಿತ್ರೆಯನ್ನು ಭಕ್ತಿ ಕಾವ್ಯವೆಂದು ಪರಿಗಣಿಸಿದ್ದಾರೆ. ಆದರೆ ಕನಕದಾಸರು ಒಬ್ಬ ಭಕ್ತನೂ, ಸಂತನೂ ಆದ ಕವಿಯಾದ್ದರಿಂದ ಶ್ರೀರಾಮನ ಮೇಗಣ ಭಕ್ತಿಯ ಮೂಲಕವೇ ಕಥೆ ಆರಂಭವಾದರೂ ಅದರ ಕಾವ್ಯ ಪರಿಣಾಮ ಇರುವುದು ಈ ಸಾಮಾಜಿಕ ಸಂಗತಿಯತ್ತ. ಹಾಗಾಗಿ ಕನಕದಾಸರ ಈ ವಿನೂತನ ನೋಟ, ವಿಶಿಷ್ಟ ಅಭಿವ್ಯಕ್ತಿ ಮತ್ತು ಮಾನವೀಯ ಮೌಲ್ಯದ ಕಡೆಗಿನ ಒತ್ತು ಈ ಕಾವ್ಯದ ಪ್ರಧಾನ ಸೆಲೆಯಾಗಿದೆ.

**ಕಾವ್ಯ ಪಠ್ಯದ ಆಯ್ದ ಭಾಗ:**
**[ಟಿಪ್ಪಣಿ: ಕಾವ್ಯದ ಆರಂಭ]**

ರಾಮಧಾನ್ಯದ ಕೃತಿಯನೀ ಜನ
ದಾಮವೆಲ್ಲಾದರಿಸುವಂದದಿ
ಭೂಮಿಗಚ್ಚರಿಯಾಗಿ ಪೇಳುವೆನೀ ಮಹಾಕಥೆಯ
ಪ್ರೇಮದಿಂದಾರಿಸಿ ಕೇಳ್ದ ಸ
ನಾಮರಿಗೆ ಸತ್ಕರುಣದಲಿ ರಘು
ರಾಮ ಪಾಲಿಸಿಕೊಡುವ ಮನದಲಿ ಇಷ್ಟಸಂಪದವ ॥

ಧರೆಯನೆಲ್ಲವ ಸೋತು ಜೂಜಲಿ
ಕುರುಪತಿಗೆ ಕೈದಳಿಸಿ ತಮ್ಮಂ
ದಿರು ಸಹಿತ ಧರ್ಮಜನು ಕಾಮ್ಯಕ ವನದೊಳಿರುತಿರಲು
ಪರಮ ಋಷಿ ಶಾಂಡಿಲ್ಯ ಮುನಿ ಸ
ತ್ಕರುಣದಲಿ ನಡೆತಂದನಲ್ಲಿಗೆ
ವರ ತಪೋಧನರೊಡನೆ ಕಾಣಿಸಿಕೊಂಡನುಚಿತದಲಿ ॥

ಧರಣಿಪತಿ ಯಮಸೂನು ತಮ್ಮಂ
ದಿರು ಸಹಿತಲಿದಿರೆದ್ದು ಮುನಿಪನ
ಚರಣಕಾನತನಾಗಿ ಕೈಮುಗಿದಿರಲು ಧರ್ಮಜನ
ಕರೆದು ಲಾಲಿಸಿ ಕುಳ್ಳಿರಿಸಿ ಸ
ತ್ಕರುಣದಲಿ ಮುನಿ ನುಡಿದನೆಲೆ ನೃಪ
ಸಿರಿ ದರಿದ್ರತೆ ನಿಲದು ಪರಿಹರವಹುದು ಕೇಳೆಂದ ॥

ಧಾರುಣಿಯೊಳರಸುಗಳು ನಾಲ್ವರು
ಭೂರಿ ಸತ್ಯವ್ರತರು ನಳನೃಪ
ಧೀರ ರಾಮ ಯುಧಿಷ್ಠಿರ ಹರಿಶ್ಚಂದ್ರರಿವರೆಂದು
ಸಾರುತಿದೆ ಜಗವೆಲ್ಲ ನಿಮ್ಮನು
ದಾರನಿದರೊಳು ರಘುಪತಿಯು ಗುಣ
ಹಾರ ಧರ್ಮವ ಪಾಲಿಸಿದ ನರೆದಲೆಗೆ ವ್ರಿಹಿಯರಿಗೆ ॥



ಎನಲು ರಾಮಚರಿತ್ರೆಯನು ನೀ
ವೆನಗೆ ಪೇಳಿದಡಾಲಿಸುವೆನೆನೆ
ಮನದೊಳಗೆ ತಾ ನಸುನಗುತ ಶಾಂಡಿಲ್ಯನು ಯುಧಿಷ್ಠಿರಗೆ
ಅನುನಯದೊಳಾದರಿಸಿ ರಘುನಂ
ದನನ ಚರಿತೆಯನರುಹಿ ಭೂಪನ
ಮನಸಿನಲ್ಲಿರುವಂತೆ ವಿಸ್ತರಿಸಿದ ಮಹಾಕಥೆಯ ॥

**ಟಿಪ್ಪಣಿ: ಶ್ರೀರಾಮಚಂದ್ರ ಯುದ್ಧ ಮುಗಿಸಿ ಅಯೋಧ್ಯೆಗೆ ಹಿಂದಿರುವಾಗ ಋಷಿಮುನಿಗಳ ಆಶ್ರಮದಲ್ಲಿ ತಂಗುತ್ತಾನೆ. ಅಲ್ಲಿ ಅವನ ಪರಿವಾರಕ್ಕೆ ಔತಣ ಏರ್ಪಡಿಸಲಾಗುತ್ತದೆ. ಮುಂದೆ –**

ಅಲ್ಲಿ ನೆರೆದ ಮಹಾಮುನೀಶ್ವರ
ರೆಲ್ಲ ತರಿಸಿದರಖಿಳ ವಸ್ತುವ
ಬೆಲ್ಲ ಸಕ್ಕರೆ ಜೇನುತುಪ್ಪ ರಸಾಯನಂಗಳಲಿ
ಭುಲ್ಲವಿಸಿ ರಚಿಸಿದ ಸುಭಕ್ಷಗ
ಳೆಲ್ಲವನು ತುಂಬಿದರು ಹೆಡಗೆಗ
ಳಲ್ಲಿ ಜೋಡಿಸಿ ಹೊರಿಸಿ ತಂದರು ರಾಮನೋಲಗಕೆ ॥

ತಂದು ಶಿಷ್ಯರು ಭಕ್ಷಗಳ ಮುದ
ದಿಂದ ಸುರಿಯಲು ನೋಡಿ ನಸುನಗೆ
ಯಿಂದ ರಘುಕುಲಸಾರ್ವಭೌಮನು ಕರೆಸಿ ನಿಜಬಲಕೆ
ಅಂದು ಕೊಡಿಸಲು ನೋಡಿದರು ರುಚಿ
ಯಿಂದ ಸವಿದರು ಭೋಜ್ಯಗಳನಾ
ನಂದದಲಿ ಕೊಂಡಾಡಿದರು ವಾನರರು ಮುನಿವರರ ॥

ಅನಿಲಸುತ ಬಾರೆಂದು ರಘುನಂ
ದನನು ಕರುಣದೊಳಿವರ ರುಚಿಯೆಂ
ತೆನಲು ಕರಗಳ ಮುಗಿದು ಬಿನ್ನೈಸಿದನು ರಘುಪತಿಗೆ
ಇನಕುಲಾನ್ವಯತಿಲಕ ಚಿತ್ತೈ
ಸೆನಗೆ ಸವಿಯಹುದಿನ್ನು ಧಾನ್ಯದ
ತನುವನೀಕ್ಷಿಸಬೇಕು ದೇವರು ತರಿಸಿ ನೀವೆಂದ ॥

ಎನಲು ರಾಮನೃಪಾಲ ಗೌತಮ
ಮುನಿಯನೀಕ್ಷಿಸಿ ಬೇಕು ಸಲೆ ತರಿ
ಸೆನಲು ಧಾನ್ಯವನೊಡನೆಯಾಲೋಚಿಸಿದರೀ ಹದನ
ಮನನಲಿದು ತಂತಮ್ಮ ಶಿಷ್ಯರ
ವಿನಯದಿಂದಲಿ ಕರೆಸಿ ತಾರೆಂ
ದೆನಲು ಮೆರೆದರು ತಳುವದವರನು ತಂದು ಸಭೆಯೊಳಗೆ ॥

ನರೆದಲೆಗನಿದು ನೆಲ್ಲು ಹಾರಕ
ಬರಗು ಜೋಳವು ಕಂಬು ಸಾಮೆಯು
ಉರುತರದ ನವಣೆಯಿದು ನವಧಾನ್ಯವೆಂದೆನಲು
ಮೆರೆವ ರಾಶಿಯ ಕಂಡು ಇದರೊಳು
ಪರಮಸಾರದ ಹೃದಯನಾರೆಂ
ದರಸಿ ಕೇಳಿದನಲ್ಲಿರುತಿಹ ಮಹಾಮುನೀಶ್ವರರ ॥

ಕೆಲರು ಗೋದಿಯ ಸಾಮೆಯನು ಕೆಲ
ಕೆಲರು ನವಣೆಯ ಕಂಬು ಜೋಳವ
ಕೆಲವು ಹಾರಕವೆಂದು ಕೆಲವರು ನೆಲ್ಲನತಿಶಯವ
ಕೆಲರು ನರೆದಲೆಗನನು ಪತಿಕರಿ
ಸಲದ ನೋಡಿದ ನೃಪತಿಯದರೊಳು
ಹಲವು ಮತವೇಕೊಂದನೇ ಪೇಳೆನಲು ಗೌತಮನು ॥

ದಾಶರಥಿ ಚಿತ್ತೈಸು ನಮ್ಮಯ
ದೇಶಕತಿಶಯ ನೆರದಲಗನೇ
ವಾಸಿಯುಳ್ಳವನೀತ ಮಿಕ್ಕಿನ ಧಾನ್ಯವೇಕೆನಲು
ಲೇಸನಾಡಿದೆ ಮುನಿಪ ಗೌತಮ
ದೋಷರಹಿತನು ಪಕ್ಷಪಾತವ
ನೀಸು ಪರಿಯಲಿ ಮಾಡುವರೆ ಶಿವಯೆಂದನಾ ವ್ರಿಹಿಗ ॥



**ಟಿಪ್ಪಣಿ: ಕೆರಳಿದ ಬತ್ತದ ವಾದ. ಮುಂದೆ –**

ಎಲ್ಲ ಧರ್ಮದ ಸಾರವನು ನೀವ್
ಬಲ್ಲಿರರಿಯಿರೆ ಎಲ್ಲರನು ನೀ
ವಿಲ್ಲಿ ನುಡಿವ ಉಪೇಕ್ಷೆಯುಂಟೇ ಸಾಕದಂತಿರಲಿ
ನೆಲ್ಲು ನಾನಿರೆ ಗೋಧಿ ಮೊದಲಾ
ದೆಲ್ಲ ಧಾನ್ಯಗಳಿರಲು ಇದರಲಿ
ಬಲ್ಲಿದನು ನರೆದಲೆಗನೆಂಬುದಿದಾವ ಮತವೆಂದ ॥

ಏನೆಲವೊ ನರೆದಲೆಗ ನೀನು ಸ
ಮಾನವೇ ಎನಗಿಲ್ಲಿ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚು ಕುಂದುಗಳ
ಜಾನಕೀ ಪತಿ ಸನಿಹದಲಿ ಕುಲ
ಹೀನ ನೀನು ಪ್ರತಿಷ್ಠ ಸುಡು ಮತಿ
ಹೀನ ನೀನೆಂದೆನುತ ಖತಿಯಲಿ ಬೈದು ಭಂಗಿಸಿದ ॥

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನಾಕನಿಳಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ ॥

ಜನಪರಿಗೆ ಶಿಶುಗಳಿಗೆ ಬಾಂಧವ
ಜನರೆಡೆಗೆ ಬ್ರಹ್ಮರ ಸಮಾರಾ

ಧನೆಗೆ ವಿದ್ಯಾರಂಭ ಕಾಲಕೆ ಸಕಲ ಭೂಸುರರ
ಮನೆಗಳಲಿ ಹರಿದಿವಸದೌಪಾ
ಸನೆಗಳಲಿ ತಾ ಯೋಗ್ಯನಹುದೆಂ
ದೆನಿಸಿಕೊಂಬೆನು ನೀನಯೋಗ್ಯನು ಭ್ರಷ್ಟ ತೊಲಗೆಂದ ॥

ಹೊಸ ಮನೆಯ ಪುಣ್ಯಾರ್ಚನೆಗೆ ಮಿಗೆ
ಯೆಸೆವ ಮದುಮಕ್ಕಳಿಗೆ ಸೇಸೆಗೆ
ವಸುಮತೀಶರ ಗರುಡಿಯಲಿ ಶಸ್ತ್ರಾಸ್ತ್ರದರ್ಚನೆಗೆ
ಎಸೆವ ವಿಪ್ರರ ಫಾಲದಲಿ ರಂ
ಜಿಸುವ ಗಂಧಾಕ್ಷತೆಯಹೆನು ಭಾ
ವಿಸಲು ಲೋಕದೊಳಾರು ಸರಿಯಿಂತೆಂದನಾ ವ್ರಿಹಿಗ ॥

ಧರಣಿಯಮರರು ಮಂತ್ರ ತಂತ್ರೋ
ಚ್ಚರಣೆಯಲಿ ಹಸ್ತಾಂಬುಜದಿ ಮಿಗೆ
ಹರಸಿ ಕೊಡಲಕ್ಷತೆಯ ಮಂಡೆಯೊಳಾಂತ ಮಹಿಮರಿಗೆ
ದುರಿತ ದುಃಖ ವಿನಾಶ ಮಂಗಳ
ಕರವಹುದು ತಾನೀವೆ ಸಂತತ
ಸಿರಿಯ ಸಂಪತ್ತಾಯುವನು ಕೇಳೆಂದನಾ ವ್ರಿಹಿಗ ॥

ಪರಿಮಳದ ಚಂದನದ ತರುವಿಗೆ
ಸರಿಯೆ ಒಣಗಿದ ಕಾಷ್ಠ ಗೋವದು
ಕರೆದ ಹಾಲಿಗೆ ಕುರಿಯ ಹಾಲಂತರವೆ ಭಾವಿಸಲು
ಪರಮ ಸಾಹಸಿ ವೀರ ಹನುಮಗೆ
ಮರದ ಮೇಲಣ ಕಪಿಯು ತಾನಂ
ತರವೆ ಫಡ ನೀನೆನಗೆ ಸರಿಯೇ ಭ್ರಷ್ಟ ತೊಲಗೆಂದ ॥

ಸುರನದಿಗೆ ತಾ ಸರಿಯೆ ಕಾಡೊಳು
ಹರಿವ ಹಳ್ಳದ ನೀರು ತಾ ಗರುಡನ
ಮರಿಗೆ ಹದ್ದಂತರವೆ ಹಂಸಗೆ ಬಕನು ಹೋಲುವುದೆ
ಸರಸ ಮರಿ ಕೋಗಿಲೆಗೆ ವಾಯಸ
ನಣಕಿಸುವ ತೆರನಾಯ್ತು ಸಾಕಿ
ನ್ನರದಲೆಗ ನೀನಾವ ಮಾನ್ಯನು ಕಡೆಗೆ ತೊಲಗೆಂದ ॥

**ಟಿಪ್ಪಣಿ: ಬತ್ತದ ಪ್ರತಿಷ್ಠೆಯ ವಾದಕ್ಕೆ ರಾಗಿಯ ಪ್ರತ್ಯುತ್ತರ. ಮುಂದೆ –**

ನುಡಿಯ ಕೇಳುತ ಕನಲಿ ಕಂಗಳು
ಕಿಡಿಮಸಗಿ ಖತಿಗೊಂಡು ನುಡಿದನು
ಸಿಡಿಲ ಘರ್ಜನೆಯಂತೆ ಸಭೆಯಲಿ ಜರೆದನಾ ವ್ರಿಹಿಯ
ನುಡಿಗೆ ಹೇಸದ ಭಂಡ ನಿನ್ನೊಳು
ಕೊಡುವರೇ ಮಾರುತ್ತರವ ಕಡು
ಜಡನಲಾ ನಿನ್ನೊಡನೆ ಮಾತೇಕೆಂದ ನರೆದಲೆಗ ॥

ಸತ್ಯಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವ ಅಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪತ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ ॥

ಸತ್ತದಿನದಾರಭ್ಯ ಮನುಜರು
ಮತ್ತೆ ಕರ್ಮವ ಹೊತ್ತು ಪಿಂಡವ
ನಿತ್ತು ತಪ್ಪದೆ ಮತ್ತೆ ವಾಯಸಕುಲವ ಕರೆಕರೆದು
ತುತ್ತನಿಡುವರು ಎಳ್ಳು ದರ್ಭೆಗೆ
ತೆತ್ತಿಗನು ನೀನಾದೆ ಕೀರ್ತಿಯ
ಹೊತ್ತುಕೊಂಡೆ ದುರಾತ್ಮ ನಿನ್ನೊಳು ಮಾತದೇಕೆಂದ ॥

ಮಳೆದೆಗೆದು ಬೆಳೆಯಡಗಿ ಕ್ಷಾಮದ
ವಿಲಯಕಾಲದೊಳನ್ನವಿಲ್ಲದೆ
ಅಳಿವ ಪ್ರಾಣಿಗಳಾದರಿಸಿ ಸಲಹುವೆನು ಜಗವರಿಯೆ
ಎಲವೊ ನೀನೆಲ್ಲಿಹೆಯೊ ನಿನ್ನಯ
ಬಳಗವದು ತಾನೆಲ್ಲಿಹುದು ಈ
ಹಲವು ಹುಲು ಧಾನ್ಯಗಳೆನಗೆ ಸರಿದೊರೆಯೆ ಕೇಳೆಂದ ॥
ಬಲ್ಲಿದರು ಬರೆ ಬಡವರಲಿ ನಿ

ನ್ನಲ್ಲಿಯುಂಟು ಉಪೇಕ್ಷೆ ನಮ್ಮಲಿ
ಸಲ್ಲದೀ ಪರಿ ಪಕ್ಷಪಾತವದಿಲ್ಲ ಭಾವಿಸಲು
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲೆ ಕುಟಿಲಾತ್ಮ ಹೋಗೆಂದ ॥

ನಾನೆಲೈ ಲೋಕದಲಿ ನಿರ್ದಯನು ಬಳಿ
ಕೇನಲೈ ಸದ್ಧರ್ಮದಲಿ ಮಧು
ಪಾನವಾದೆಯಲಾ ದುರಾತ್ಮಕ ನಿನ್ನ ಸೇವಿಸಿದ
ದಾನವರು ಮಾನವ ಕಿರಾತರು
ಜ್ಞಾನವಳಿದು ವಿಕಾರದಲಿ ಮತಿ
ಹೀನರಾದರು ನಿನ್ನ ಗುಣವೇನೆಂದನು ವ್ರಿಹಿಗ ॥

ಆಡಬಹುದತಿಶಯವ ನೀ ಕೊಂ
ಡಾಡಿ ಕೊಂಬರೆ ಸಾಕು ಸಜ್ಜನ
ರಾಡಿದರೆ ಪತಿಕರಿಸೆ ಲಜ್ಜೆಗೆ ಸಿರವ ಬಾಗುವರು
ನೋಡಿರೈ ಸಭೆಯವರು ದುರ್ಮತಿ
ಗೇಡಿ ಇವನಾಡುವದ ನಾವಿ
ನ್ನಾಡಿದರೆ ಹುರುಳಿಲ್ಲ ಶಿವಶಿವಯೆಂದ ನರೆದಲೆಗ ॥

ಸತ್ತವರ ಪ್ರತಿಬಿಂಬರೂಪನು
ಬಿತ್ತರಿಸಿ ಪಿತೃನಾಮಗಳ ನಿನ
ಗಿತ್ತು ಮೂವರ ಪೆಸರಿನಲಿ ಕರೆಕರೆದು ದರ್ಭೆಯಲಿ
ನೆತ್ತಿಯನು ಬಡಿಬಡಿದು ಕಡೆಯಲಿ
ತುತ್ತನಿಡುವರು ಪಶುಗಳಿಗೆ ನೀ
ನೆತ್ತಿದೆಯೆಲಾ ತನುವ ಸುಡಬೇಕೆಂದ ನರೆದಲೆಗ ॥

ಏನಿಹಿರಿ ಹಿರಿಕಿರಿದ ನುಡಿಯದೆ
ಮೌನದೀಕ್ಷಿತರಾದಿರಲ ಕಂ
ಡೇನು ಮುರಿದಾಡುವಿರಸಾಧ್ಯವೊ ಸಾಧ್ಯವೋ ನಿಮಗೆ
ಈ ನಪುಂಸಕನಲಿ ನಿರಂತರ
ವೇನು ಕಾರಣ ವಾದವಿದು ನಮ
ಗೇನು ಬುದ್ಧಿಯನರುಹುವಿರಿ ಪೇಳೆಂದ ನರೆದಲೆಗ ॥

ಮಸೆದುದಿತ್ತಂಡಕ್ಕೆ ಮತ್ಸರ
ಪಿಸುಣ ಬಲರತಿ ನಿಷ್ಠುರರು ವಾ
ದಿಸಲು ಕಂಡನು ನೃಪತಿ ಮನದಲಿ ನೋಡಿ ನಸುನಗುತ
ಹಿಸುಣರಿವದಿರ ಮತ್ಸರವ ಮಾ
ಣಿಸುವ ಹದನೇನೆನುತ ಯೋಚಿಸಿ
ದಸುರ ಮುನಿಪರ ನೋಡೆ ಗೌತಮ ಮುನಿಪನಿಂತೆಂದ ॥

ಅರಸುಗಳು ನಾವೆಲ್ಲ ಭೂಮೀ
ಸುರರು ನೆರದಿಹ ದಾನವರು ವಾ
ನರರು ನಮಗೀ ನ್ಯಾಯವನು ಪರಿಹರಿಸಲಳವಲ್ಲ
ಕರಸುವೆವು ಹರಿಹರವಿರಂಚಾ
ದ್ಯರನಯೋಧ್ಯೆಗೆ ಅವರ ಗುಣವಾ
ಧರಿಸಿ ಪೇಳ್ವರು ನಯದೊಳೆಂದನು ರಾಮ ನಸುನಗುತ ॥

ಪರಮ ಧಾನ್ಯದೊಳಿಬ್ಬರೇ ಇವರಿರಲಿ
ಸೆರೆಯೊಳಗಾರು ತಿಂಗಳು
ಹಿರಿದು ಕಿರಿದೆಂಬಿವರ ಪೌರುಷವರಿಯಬಹುದಿನ್ನು
ಪುರಕೆ ಗಮನಿಸಿ ನಾವು ನಿಮ್ಮನು
ಕರೆಸುವೆವು ಕೇಳೆನುತಯೋಧ್ಯಾ
ಪುರಿಗೆ ಪಯಣವ ಮಾಡಹೇಳಿದನಾ ವಿಭೀಷಣನಿಗೆ ॥

**ಟಿಪ್ಪಣಿ: ಆರು ತಿಂಗಳು ಕಳೆದ ಮೇಲೆ ಶ್ರೀರಾಮಚಂದ್ರ ಸೆರೆವಾಸದಲ್ಲಿದ್ದ ಬತ್ತ, ರಾಗಿಯನ್ನು ಆಸ್ಥಾನಕ್ಕೆ ಕರೆಸಿಕೊಂಡ ಮೇಲೆ –**

ಆರು ನುಡಿಯರೆ ನೀವು ಹಿರಿಯರು
ಮೀರಿಸುವರಾರಿವರೊಳಗೆ ಗುಣ
ಸಾರನಾವನು ಪೇಳೆನಲು ಜಂಭಾರಿ ನಸುನಗುತ
ಸಾರಹೃದಯನು ನರೆದಲೆಗ ನಿ
ಸ್ಸಾರನೀ ವ್ರಿಹಿಯೆನಲು ಗುಣನಿಧಿ

ಮಾರುತಾತ್ಮಜ ನೋಡಿದನು ಸನ್ನೆಯಲಿ ನಾರದನ ॥

ಅಹುದು ಸುರಪನ ಮಾತು ನಿಶ್ಚಯ
ವಹುದು ನರೆದಲೆಗನೆ ಸಮರ್ಥನು
ಬಹಳ ಬಲಯುತ ಸೆರೆಗೆ ತಳ್ಳಲು ಕಾಂತಿಗೆಡಲಿಲ್ಲ
ಸಹಜವಿದು ಪರಪಕ್ಷವಾದಡೆ
ವ್ರಿಹಿ ಕರಗಿ ಕಂದಿದನು ಸೆರೆಯಲಿ
ವಿಹಿತವದು ಕೇಳೆಂದು ನಾರದ ನುಡಿದ ನಸುನಗುತ ॥

ಎಲ್ಲ ನವಧಾನ್ಯದಲಿ ಈತನೆ
ಬಲ್ಲಿದನು ಹುಸಿಯಲ್ಲ ಬಡವರ
ಬಲ್ಲಿದನಾರೈದು ಸಲಹುವನಿವಗೆ ಸರಿಯುಂಟೆ
ನೆಲ್ಲಿನಲಿ ಗುಣವೇನು ಭಾಗ್ಯದಿ
ಬಲ್ಲಿದರ ಪತಿಕರಿಸುವನು ಅವ
ನಲ್ಲಿ ಸಾರವ ಕಾಣೆಯೆಂದನು ಕಪಿಲಮುನಿ ನಗುತ ॥

ಸುರಮುನಿಗಳಿಂತೆನಲು ಭೂಸುರ
ವರರು ಸಂತೋಷಿಸಲು ಸಭಿಕರು
ನರೆದಲಗ ನೀ ಬಾರೆನುತ ರಾಮನೃಪಾಲ ನೆರೆಮೆಚ್ಚಿ
ಕರೆದುಕೊಟ್ಟನು ತನ್ನ ನಾಮವ
ಧರೆಗೆ ರಾಘವನೆಂಬ ಪೆಸರಾ
ಯ್ತಿರದೆ ವ್ರಿಹಿ ನಾಚಿದನು ಸಭೆಯಲಿ ಶಿರವ ಬಾಗಿಸಿದ ॥

ಶರಧಿಶಯನ ಮುಕುಂದ ಸಚರಾ
ಚರಭರಿತ ನಿರ್ಗುಣ ನಿರಾಮಯ
ಸುರ ನರೋರಗವಂದ್ಯ ವರಪುರದಾದಿಕೇಶವನ
ಚರಣದಂಕಿತಮಾಗಿ ಪೇಳಿದ
ಪರಮಧಾನ್ಯದ ಚರಿತೆ ಸಂತತ
ಧರೆಯೊಳಿಂತೊಪ್ಪಿಹುದು ಆಚಂದ್ರಾರ್ಕ ಪರಿಯಂತ ॥

**ಸಂಗ್ರಹ ನೆರವು: ಕಾ.ತ.ಚಿಕ್ಕಣ್ಣ**



## ಕೀರ್ತನೆಗಳು

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಪ್ರಕಟಿಸಿರುವ ಕೀರ್ತನೆಗಳ ಸಂಪುಟದ ಪ್ರಕಾರ ೩೧೬ ಕೀರ್ತನೆಗಳು ಇವೆ. ಇವುಗಳಲ್ಲಿ ಕೀರ್ತನೆಗಳು, ಮುಂಡಿಗೆಗಳು, ಉಗಾಭೋಗಗಳೂ ಸೇರಿವೆ.

**ಕಾವ್ಯ ಹಿನ್ನೆಲೆ:**

ಕನಕದಾಸರ ಕೀರ್ತನೆಗಳನ್ನು ಶಿಲ್ಪ, ಕಾವ್ಯ, ಭಕ್ತಿ, ಅಧ್ಯಾತ್ಮ, ಸಾಮಾಜಿಕ ನೀತಿ, ಜೀವನಮೌಲ್ಯ, ವೈಚಾರಿಕತೆ ಮುಂತಾದ ವಿವಿಧ ದೃಷ್ಟಿಕೋನಗಳಿಂದ ವಿವೇಚಿಸಬಹುದು. ಶ್ರೀಹರಿಯ ಸ್ತುತಿ, ಆತ್ಮನಿವೇದನೆ, ದಶಾವತಾರದ ವರ್ಣನೆ, ಕೃಷ್ಣಲೀಲೆ ಮುಂತಾದವುಗಳು ಭಕ್ತಿಯ ಭಾವಲಹರಿಗಳಾದರೆ; ಸಂಸಾರದ ನಶ್ವರತೆ, ಹರಿಸರ್ವೋತ್ತಮತ್ವ, ಯೋಗಸಾಧನೆಗಳು ಅನುಭಾವದ ಕಡೆಗೆ ಕರೆದೊಯ್ಯುತ್ತವೆ. ಬದುಕನ್ನು ಕಟ್ಟಿಕೊಳ್ಳಲು ನೆರವಾಗುವ ಸರಳಸೂತ್ರಗಳು, ಮೂಢನಂಬಿಕೆಗಳ ವಿಡಂಬನೆ ಇವೆಲ್ಲ ಆಧುನಿಕ ಯುಗಕ್ಕೆ ಅತ್ಯಂತ ಹೆಚ್ಚು ಪ್ರಸ್ತುತವಾಗಿವೆ. ಜನಪದ ಸಂಗೀತದಿಂದ ಹಾಡಬಹುದಾದ ಅನೇಕ ಕೀರ್ತನೆಗಳು ಕನಕದಾಸರ ದೇಸೀಯತೆಯ ಪ್ರೀತಿಗೆ ಸಾಕ್ಷಿಯಾಗಿವೆ. ಭಕ್ತಿ, ಸಂಗೀತ, ವಿಡಂಬನೆ, ಚಿಂತನೆ, ಸಾಮಾಜಿಕ ಕಾಳಜಿಗಳನ್ನು ಒಳಗೊಂಡ ಕನಕದಾಸರ ಕೀರ್ತನೆಗಳು ಕನ್ನಡ ನಾಡಿನಲ್ಲಿ ಹೆಚ್ಚು ಜನಪ್ರಿಯವಾಗಿವೆ.

**ಕಾವ್ಯ ದರ್ಶನ:**

ದಾಸ ಪರಂಪರೆಯಲ್ಲಿ ಇತರೆ ದಾಸರಿಗಿಂತ, ಕೀರ್ತನಕಾರರಿಗಿಂತ ಕನಕದಾಸರನ್ನು ಹೆಚ್ಚು ಉಲ್ಲೇಖಿಸಿ ಸಾಮಾಜಿಕ ವಿಚಾರಗಳನ್ನು ಚರ್ಚಿಸಲಾಗಿದೆ. ಅದರಲ್ಲಿಯೂ ಕೀರ್ತನಕಾರರ ಸಾಮಾಜಿಕ ನಿಲುವನ್ನು ಚರ್ಚಿಸುವಾಗಲಂತೂ ಕನಕದಾಸರನ್ನು ಬಿಟ್ಟು ವಿಚಾರ ಮಾಡಲು ಸಾಧ್ಯವೇ ಇಲ್ಲದಷ್ಟು ಕನಕರನ್ನು ಬಳಸಲಾಗಿದೆ. ಇತರೆ ಕೀರ್ತನಕಾರರು ಹಾಗೂ ಸಂತರಿಗಿಂತ ಹೆಚ್ಚು ಕನಕದಾಸರು ಕರ್ನಾಟಕದ ಸಾಂಸ್ಕೃತಿಕ ನಾಯಕರಾಗಿ ಚರ್ಚೆಯಲ್ಲಿದ್ದಾರೆ. ಕನಕದಾಸರು ತಮ್ಮ ಕೀರ್ತನೆಗಳು ಮತ್ತು ಕಾವ್ಯ ಕೃತಿಗಳ ಮೂಲಕ ಮಂಡಿಸಿದ ವಿಚಾರಗಳು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವಾಗಿವೆ.

ಇದುವರೆಗೆ ಬಂದಿರುವ ಕನಕದಾಸರ ಕುರಿತಾದ ಎಷ್ಟೋ ಬರೆಹಗಳು, ಚರ್ಚೆಗಳು ವಿವರಣೆಯ ಮಾದರಿಯವು. ಕೆಲವು ಬರೆಹಗಳು ಒಂದರ ಪುನರುತ್ಪತ್ತಿಯಾಗಿರುವವು. ಇಂತಹ ಪುನರುತ್ಪಾದನೆಯ ಸಮಸ್ಯೆಯನ್ನು ನಿವಾರಿಸಬೇಕಿದೆ. ಜೊತೆಗೆ ಕನಕದಾಸರು ಮಂಡಿಸಿದ ವಿಚಾರಗಳ ತಾತ್ವಿಕ ನೆಲೆಗಟ್ಟನ್ನು ಸಮಕಾಲೀನ ಸಂದರ್ಭದಲ್ಲಿ ಇದಿರಿರಿಸಿಕೊಂಡು ವಿವರಣೆ ಮತ್ತು ಪುನರುತ್ಪಾದನೆಯ ಬಿಕ್ಕಟ್ಟಿನಿಂದ ಬಿಡುಗಡೆಗೊಂಡು ತಾತ್ವಿಕ ವಾಗ್ವಾದಕ್ಕೆ ತೊಡಗಬೇಕಾಗಿದೆ. ಇಲ್ಲದಿದ್ದರೆ ಕನಕದಾಸರ ಅಪಾರವಾದ ಸಾಹಿತ್ಯದಲ್ಲಿ 'ನಮಗೆ ಬೇಕಾದ ಭಾಗಗಳನ್ನು' ಮಾತ್ರ ಆರಿಸಿಕೊಂಡು ವಿವರಿಸುವುದು ದಾರ್ಶನಿಕರ ಚಿಂತನೆಯನ್ನು ಪಾರ್ಶ್ವಿಕವಾದ ಅಧ್ಯಯನಕ್ಕೆ ಒಳಪಡಿಸಿದಂತೆ ಆಗುತ್ತದೆ. ವ್ಯಕ್ತಿತ್ವದ ಪೂರ್ಣ ಚಿತ್ರಣವೂ ಸಿಗುವುದಿಲ್ಲ. ಯಾಕೆಂದರೆ ಒಬ್ಬ ಕವಿಯ ಅಧ್ಯಯನ ಕೇವಲ ಅವನ ಬರೆಹದ ಅಧ್ಯಯನವಾಗಿರುವುದಿಲ್ಲ. ಅದು ಒಂದು ಕಾಲಮಾನದ ಸಾಮಾಜಿಕ ಸೈದ್ಧಾಂತಿಕ ಚಿಂತನೆಗಳ ಅಧ್ಯಯನವೂ ಆಗಿರುತ್ತದೆ. ಆದ್ದರಿಂದ ಕನಕದಾಸರ ಅಧ್ಯಯನಗಳು ಈ ಜಾಡಿನಲ್ಲಿ ವಿಸ್ತೃತವಾಗಿ ನಡೆಯಬೇಕೆಂಬುದು ಈ ಮಾತಿನ ಸಾರಾಂಶ.

'ಕನಕ ಓದು' ಕೈಪಿಡಿಗೆ ಪ್ರಸಿದ್ಧವಾಗಿರುವ ಕನಕದಾಸರ ಇಪ್ಪತ್ತು ಕೀರ್ತನೆಗಳನ್ನು ಮಾತ್ರ ಆಯ್ದು ಕೊಡಲಾಗಿದೆ. ಇವೆಲ್ಲವನ್ನು ಹೆಚ್ಚು ಚರ್ಚೆಗೆ ಒಡ್ಡಿ ಕನಕದಾಸರ ಜನಪರ ಲೋಕದೃಷ್ಟಿಯನ್ನು ಚರ್ಚಿಸಲಾಗಿದೆ. ಇದು ಕನಕದಾಸರ ಒಂದು ಆಯಾಮ ಮಾತ್ರ. ಅದಕ್ಕೂ ಮಿಗಿಲಾದ ಕಾಳಜಿ ಕನಕದಾಸರಲ್ಲಿ ವ್ಯಕ್ತವಾಗಿರುವುದು ಭಕ್ತಿ–ಜ್ಞಾನ–ವೈರಾಗ್ಯ–ಆದಿಕೇಶವರ ಬಗೆಗೆ. ಇವುಗಳ ಜನಪರ ಆಯಾಮ ಎಂತಹದು ಎಂಬುದನ್ನು ಸಹ ನಾವು ವಿಶ್ಲೇಷಿಸಬೇಕಾಗಿದೆ.

ಇದು ಒಂದು ನೆಲೆಯಲ್ಲಿ ಅಕಾಡೆಮಿಕ್ ಆದ ಬೌದ್ಧಿಕ ಚಟುವಟಿಕೆಯೇ ಸರಿ. ಇಂತಹ ಚಟುವಟಿಕೆಗಳ ಫಲಿತವನ್ನು ಕೇವಲ ಅಕಾಡೆಮಿಕ್ ವಲಯಕ್ಕೆ ಮಾತ್ರ ಸೀಮಿತಗೊಳಿಸದೆ ಅದನ್ನು ಜನಪದರ ಬಳಿಗೆ ಕೊಂಡೊಯ್ಯುವ ದಾರಿಗಳೇನು? ಎಂಬುದರ ಬಗೆಗೂ ಯೋಚಿಸಬೇಕಿದೆ. ಆ ಮೂಲಕ ಕನಕದಾಸರ ಆರೋಗ್ಯಪೂರ್ಣ ಚಿಂತನೆಗಳನ್ನು ಪರ್ಯಾಯ ರಾಜಕಾರಣದ ಇಂದಿನ ನೆಲೆಗಳಿಗೆ ಪೂರಕವಾಗಿ ಹುಡುಕಿಕೊಳ್ಳಬೇಕಿದೆ. ಆದ್ದರಿಂದ ಕನಕದಾಸರ ಜನಪರ ವಿಚಾರಗಳನ್ನು ಜನರಿಗೆ ತಲುಪಿಸುವ ಪ್ರಯತ್ನ ನಿರಂತರವಾಗಿ ಹಾಗೂ ಹಲವು ಮಜಲುಗಳಿಂದ ನಡೆಯಬೇಕೆಂಬುದು ಆಶಯ.

ಇತ್ತೀಚಿನ ದಿನಮಾನಗಳಲ್ಲಿ ಸಮಾಜದಲ್ಲಿ ಅಸಹಿಷ್ಣುತೆಯ ಭಾವನೆ ತುಂಬಿಕೊಳ್ಳತೊಡಗಿದೆ. ಇಂತಹ ಅಸಹಿಷ್ಣುತೆಯ ಒತ್ತಡಕ್ಕೆ ಕನಕದಾಸರೂ ಸಿಕ್ಕಿ ನರಳಿದವರೆ ಮತ್ತು ಅದರ ವಿರುದ್ಧ ನಿರಂತರವಾಗಿ ಹೋರಾಡಿದವರೆ. ಈ ಕಾರಣಕ್ಕೂ ಕನಕರು ನಮಗೆ ಪ್ರಸ್ತುತವಾಗಿದ್ದಾರೆ. ಅವರು ಮಹಾನ್ ಭಕ್ತರಾದರೂ ಬೇರೆಯವರ ನಂಬಿಕೆಗಳನ್ನು ಅಪಮಾನಿಸಿದವರಲ್ಲ. ಅಂತಹ ಭಕ್ತಿ ಇಂದಿನ ದೈವಭಕ್ತರಿಗೆ ಬಂದರೇ ಎಷ್ಟೋ ಸಮಸ್ಯೆಗಳು ಬಗೆಹರಿಯಬಲ್ಲವು. ಅಂತಹ ಭಾವನೆಗಳನ್ನು ಬೆಳೆಸುವ ವಿಚಾರಗಳು ಕನಕದಾಸರ ಕೀರ್ತನೆಗಳಲ್ಲಿ ಅಡಕವಾಗಿವೆ. ಅಂದರೆ ಭಕ್ತಿ, ಸಹಿಷ್ಣುತೆ, ಜಾತ್ಯತೀತ ಮೌಲ್ಯಗಳು, ವರ್ಗನಿರಸನ ಮುಂತಾದ ಮೌಲ್ಯಗಳು ಕನಕರಲ್ಲಿ ವಿಪುಲವಾಗಿದ್ದು ಅಂತಹ ವಿಚಾರಗಳ ಸಾರವನ್ನು ಇಂದಿನ ಸಮಾಜದ ಜನರಿಗೆ ಹರಿಸಲು ಕನಕರ ಹೊಸ ಓದು ಅಗತ್ಯವಿದೆ. ಅವರ ಕೀರ್ತನೆಗಳು ಈ ದಿಸೆಯಲ್ಲಿ ಸಾಮಗ್ರಿ ಒದಗಿಸಿಕೊಡುತ್ತವೆ.



**ಆಯ್ದ ಕೀರ್ತನೆಗಳು:**
**ಮುತ್ತು ಬಂದಿದೆ ಕೇರಿಗೆ**

ಮುತ್ತು ಬಂದಿದೆ ಕೇರಿಗೆ–ಜನರು ಕೇಳಿ ॥ಪ॥
ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ ॥ಅ॥

ಥಳಥಳಿಸುವ ಮುತ್ತು ಕಮಲ ನೇತ್ರದ ಮುತ್ತು
ಕಲುಷ ಪರ್ವತಕ್ಕಿದು ಕುಲಿಶವಾಗಿಹ ಮುತ್ತು
ಹಲಧರಾನುಜನೆಂಬ ಪವಿತ್ರ ನಾಮದ ಮುತ್ತು
ಒಲಿದು ಭಜಿಪರ ಭವವ ತರಿದು ಕಾಯುವ ಮುತ್ತು ॥೧॥

ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು
ಭಂಜಿಸಿದವರಿಗೆ ಭಯವ ತೋರುವ ಮುತ್ತು
ಸಂಜೀವರಾಯರ ಹೃದಯದೊಳಗಿಹ ಮುತ್ತು
ಕಂಜಭವಾದಿಗಳೆ ಶಿರಸಾವಹಿಸುವ ಮುತ್ತು ॥೨॥

ಜ್ಞಾನವೆಂಬ ದಾರದಲ್ಲಿ ಪೋಣಿಸಿ ನೋಡುವ ಮುತ್ತು
ಜ್ಞಾನಿಗಳ ಮನದಲ್ಲಿ ಮೆರೆವ ಮುತ್ತು
ಆನಂದತೀರ್ಥರ ಮನದಲೊಪ್ಪುವ ಮುತ್ತು
ಶ್ರೀನಿಧಿ ಆದಿಕೇಶವನೆಂಬ ಆಣಿಮುತ್ತು ॥೩॥

**ನಮ್ಮಮ್ಮ ಶಾರದೆ**

ನಮ್ಮಮ್ಮ ಶಾರದೆ ಉಮಾ ಮಹೇಶ್ವರಿ।
ನಿಮ್ಮೊಳಗಿಹನ್ಯಾರಮ್ಮ ॥ಪ॥
ಕಮ್ಮಗೋಲನ ವೈರಿಸುತನಾದ ಸೊಂಡಿಲ।
ಹೆಮ್ಮೆಯ್ಯ ಗಣನಾಥನೆ ಅಮ್ಮಯ್ಯ ॥ಅ॥

ಮೋರೆ ಕಪ್ಪಿನ ಭಾವ ಮೊರದಗಲ ಕಿವಿಯುಳ್ಳ
ಕೋರೆ ದಾಡೆಯವನ್ಯಾರಮ್ಮ॥
ಮೂರು ಕಣ್ಣಿನ ಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ಅಮ್ಮಯ್ಯ ॥೧॥

ಉಟ್ಟ ದಟ್ಟಿಯು ಮತ್ತೆ ಬಿಗಿದುಟ್ಟ ಚಲ್ಲಣದ।
ದಿಟ್ಟ ತಾನಿವನ್ಯಾರಮ್ಮ॥
ಪಟ್ಟದ ರಾಣಿ ಪಾರ್ವತಿಯ ಕುಮಾರ
ಹೊಟ್ಟೆಯ ಗಣನಾಥನೆ ಅಮ್ಮಯ್ಯ ॥೨॥

ರಾಶಿ ವಿದ್ಯೆಯ ಬಲ್ಲ ರಮಣಿ ಹಂಬಲನೊಲ್ಲ।
ಭಾಷಿಗನಿವನ್ಯಾರಮ್ಮ॥
ಲೇಸಾಗಿ ಸುಜನರ ಸಲಹುವ ನೆಲೆಯಾದಿ।
ಕೇಶವನ ದಾಸ ಕಾಣೆ ಅಮ್ಮಯ್ಯ ॥೩॥

**ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು**

ವರಕವಿಗಳ ಮುಂದೆ ನರಕವಿಗಳ ವಿದ್ಯೆ ತೋರಬಾರದು – ಈ
ಧರಣಿಯ ಕಲ್ಲಿಗೆ ಶರಣೆಂದು ಪೂಜೆಯ ಮಾಡಬಾರದು ॥ಪ॥

ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು–ಬಹು
ಕೋಪಿಗಳಿದ್ದಲ್ಲಿ ಅನುಭವಗೋಷ್ಠಿಯ ಮಾಡಬಾರದು ॥೧॥

ಅಡಿ ಸತ್ತ ಮಡಕೆಗೆ ಜೋಡಿಸಿ ಒಲೆಗುಂಡು ಹೂಡಬಾರದು–ಬಹು
ಬಡತನ ಬಂದಾಗ ನೆಂಟರ ಬಾಗಿಲ ಸೇರಬಾರದು ॥೨॥

ಹರಿಯ ನಿಂದಿಸಿ ಹರ ಘನನೆಂದು ನರಕಕ್ಕೆ ಬೀಳಬಾರದು–ತಾ
ಪರರನು ಬೈದು ಪಾತಕಕೆ ಮುನ್ನೊಳಗಾಗಬಾರದು ॥೩॥
ಮಡದಿ ನುಡಿಯ ಕೇಳಿ ಜಗಳಕೊಬ್ಬರ ಕೂಡೆ ಹೋಗಬಾರದು–ಬಾ
ಯ್ಬಡಿಕರು ಇದ್ದಲ್ಲಿ ವಸ್ತಿ ಬಿಡಾರವ ಮಾಡಬಾರದು ॥೪॥

ಮುಂದೆ ಭಲಾ ಎಂದು ಹಿಂದೆ ನಿಂದಿಪರನ್ನು ಕೂಡಬಾರದು–ನಮ್ಮ
ತಂದೆ ಬಾಡದಾದಿಕೇಶವನ ಸ್ಮರಣೆಯ ಬಿಡಬಾರದು ॥೫॥

**ನಾವು ಕುರುಬರು**

ನಾವು ಕುರುಬರು, ನಮ್ಮ ದೇವರು ಬೀರಯ್ಯ
ಕಾವ ನಮ್ಮಜ್ಜ ನರಕುರಿಯ ಹಿಂಡುಗಳು ॥ಪ॥

ಅಷ್ಟಮದ ಮತ್ಸರಗಳೆಂತೆಂಬ ಟಗರುಗಳು
ದೃಷ್ಟಿ ಜೀವಾತ್ಮನೆಂತೆಂಬ ಆಡು
ಸೃಷ್ಟಿ ಸಿದ್ಧ ಪ್ರಸಿದ್ಧವೆಂತೆಂಬ ಹೋತಗಳು
ಕಟ್ಟಿ ಕೋಲಿನಲಿ ಇರಿಯುತಿಹ ನಮ್ಮಜ್ಜ ॥೧॥

ವೇದ ಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು
ಕಾದಿದ್ದು ನಮ್ಮಜ್ಜನ ಹಿಂಡೊಳಗೆ
ಹಾದಿಗಾಣದೆ ಕೂಗಿ ಬಾಯಾರಿ ಕಾಲ್ಗೆಡಲು
ಆದರಿಸಿ ಅಂಬಲಿಯನೆರೆವ ನಮ್ಮಜ್ಜ ॥೨॥

ಅರಿವೆಂಬ ಮರಿಗಳು ಹಿಂಡಿನೊಳಗಡೆ ಬರಲು
ಮರೆವೆಂಬ ವ್ಯಾಘ್ರ ಕಿರುಬ ತೋಳಗಳು ಹೊಕ್ಕು
ತರುಬಿ ಹಿಂಜಾವದಲಿ ಕುರಿಯ ಮುರಿವುದ ಕಂಡು
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ ॥೩॥

ಹುಟ್ಟುವದಕೆ ಮೊದಲಿಲ್ಲ ಸಾವುದಕೆ ಕೊನೆಯಿಲ್ಲ
ಹುಟ್ಟುಸಾವಿನ ಹೊಲಬ ಬಲ್ಲ ನಮ್ಮಜ್ಜ
ಅಷ್ಟು ಪ್ರಾಣಿಗಳಿಗೆ ಇಷ್ಟು ಅಂಬಲಿ ಮಾಡಿ
ಹೊಟ್ಟೆ ತುಂಬುವ ಹಾಗೆ ಎರೆವ ನಮ್ಮಜ್ಜ ॥೪॥
ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ
ಕಲಿಯುಗಂಗಳನೆಲ್ಲ ಪೊರೆವಾತನೀತ
ಜಲಜಾಕ್ಷ ಕಾಗಿನೆಲೆಯಾದಿಕೇಶವನ ಮನ
ವೊಲಿಸಿ ಭಜಿಸದ ಮನುಜ ಹುಚ್ಚು ಕುರುಬ ॥೫॥

**ದ್ಯಾವಿ ನಮ್ಮ ದ್ಯಾವರು ಬಂದರು**

ದ್ಯಾವಿ ನಮ್ಮ ದ್ಯಾವರು ಬಂದರು ಬನ್ನೀರೆ, ನೋಡ ಬನ್ನೀರೆ ॥ಪ॥

ಕೆಂಗಣ್ಣ ಮೀನನಾಗಿ ನಮರಂಗ
ಗುಂಗಾಡು ಸೋಮನ ಕೊಂದಾನ್ಯಾ
ಗುಂಗಾಡು ಸೋಮನ ಕೊಂದು ವೇದವನು
ಬಂಗಾರದೊಡಲಿನಿಗಿತ್ತಾನ್ಯಾ ॥೧॥

ದೊಡ್ಡ ಮಡುವಿನೊಳಗೆ ನಮ ರಂಗ
ಗುಡ್ಡವ ಹೊತ್ಕೊಂಡು ನಿಂತಾನ್ಯಾ
ಗುಡ್ಡವ ಹೊತ್ಕೊಂಡು ನಿಂತು ಸುರರನು
ದೊಡ್ಡವರನ್ನ ಮಾಡ್ಯಾನ್ಯಾ ॥೨॥

ಚೆನ್ನ ಕಾಡಿನ ಹಂದಿಯಾಗಿ ನಮ ರಂಗ
ಚಿನ್ನದ ಕಣ್ಣನ ಕೊಂದಾನ್ಯಾ
ಚಿನ್ನದ ಕಣ್ಣನ ಕೊಂದು ಭೂಮಿಯ
ವನಜ ಸಂಭವಗಿತ್ತಾನ್ಯಾ ॥೩॥

ಸಿಟ್ಟಿಂದ ಸಿಂಹನಾಗಿ ನಮ ರಂಗ
ಹೊಟ್ಟೆಯ ಕರುಳ ಬಗೆದಾನ್ಯಾ
ಹೊಟ್ಟೆಯ ಕರುಳ ಹಾರವ ಮಾಡಿ
ಪುಟ್ಟಗೆ ವರವ ಕೊಟ್ಟಾನ್ಯಾ ॥೪॥

ಹುಡುಗ ಹಾರುವನಾಗಿ ನಮ ರಂಗ
ಬೆಡಗಲಿ ಮುಗಿಲಿಗೆ ಬೆಳೆದಾನ್ಯಾ
ಬೆಡಗಲಿ ಮುಗಿಲಿಗೆ ಬೆಳೆದು ಬಲಿಯನ್ನ
ಅಡಿಯಿಂದ ಪಾತಾಳಕೊತ್ತ್ಯಾನ್ಯಾ ॥೫॥

ತಾಯ ಮಾತನು ಕೇಳಿ ಸಾಸಿರ ತೋಳಿನ
ಆವಿನ ಕಳ್ಳನ ಕೊಂದಾನ್ಯಾ
ಆವಿನ ಕಳ್ಳನ ಕೊಂದು ಭೂಮಿಯ
ಅವನಿಸುರರಿಗೆ ಇತ್ತ್ಯಾನ್ಯಾ ॥೬॥

ಪಿಂಗಳ ಕಣ್ಣಿನ ಕೊಂಗಗಳ ಕೂಡಿ
ಛಂಗನೆ ಲಂಕೆಗೆ ಪೋದಾನ್ಯಾ
ಛಂಗನೆ ಲಂಕೆಗೆ ಪೋಗಿ ನಮರಂಗ
ಹೆಂಗಸುಗಳ್ಳನ ಕೊಂದಾನ್ಯಾ ॥೭॥

ಕರಿಯ ಹೊಳೆಯ ಬಳಿ ತುರುಗಳ ಕಾಯುತ
ಉರಗನ ಮಡುವ ಧುಮುಕ್ಯಾನ್ಯಾ
ಉರಗನ ಹೆಡೆಮೇಲೆ ಹಾರ್ಹಾರಿ ಕುಣಿವಾಗ
ವರವ ನಾರೇರ್ಗೆ ಕೊಟ್ಟಾನ್ಯಾ ॥೮॥

ಭಂಡನಂದದಿ ಕುಂಡೆಯ ಬಿಟುಗೊಂಡು
ಕಂಡಕಂಡಲ್ಲಿಗೆ ತಿರುಗ್ಯಾನ್ಯಾ
ಕಂಡ ಕಂಡಲ್ಲಿಗೆ ತಿರುಗಿ ತ್ರಿಪುರರ
ಹೆಂಡಿರನೆಲ್ಲ ಕೆಡಿಸ್ಯಾನ್ಯಾ ॥೯॥

ಚೆಲುವ ಹೆಂಡತಿಯ ಕುದುರೆಯ ಮಾಡಿ
ಒಳ್ಳೆ ರಾಹುತನಾದಾನ್ಯಾ
ಒಳ್ಳೆ ರಾಹುತನಾಗಿ ಮ್ಲೇಚ್ಛರ
ಡೊಳ್ಳು ಹೊಟ್ಟೆಯ ಮ್ಯಾಲೊದ್ದಾನ್ಯಾ ॥೧೦॥

ಡೊಳ್ಳಿನ ಮ್ಯಾಲ್ಕೈ ಭರಮಪ್ಪ ಹಾಕ್ಯಾನು
ತಾಳವ ಶಿವನಪ್ಪ ತಟ್ಯ್ಯಾನ್ಯಾ
ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು
ಚೆಲುವ ಕನಕಪ್ಪ ಕುಣಿದಾನ್ಯಾ ॥೧೧॥

**ತಲ್ಲಣಿಸದಿರು ಕಂಡ್ಯ ತಾಳು ಮನವೆ**

ತಲ್ಲಣಿಸದಿರು ಕಂಡ್ಯ ತಾಳು ಮನವೆ ॥ಪ॥
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥ಅ॥
ಬೆಟ್ಟದಾ ತುದಿಯಲ್ಲಿ ಹುಟ್ಟಿದ ವೃಕ್ಷಕ್ಕೆ
ಕಟ್ಟೆಯನು ಕಟ್ಟಿ ನೀರೆರೆದವರು ಯಾರೊ
ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾಗಿರಲು
ಗಟ್ಯಾಗಿ ಸಲಹುವನು ಇದಕೆ ಸಂಶಯವಿಲ್ಲ ॥೧॥

ಅಡವಿಯೊಳಗಾಡುವ ಮೃಗ ಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರು ಯಾರೊ
ಪಡೆದ ಜನನಿಯ ತೆರದಿ ಸ್ವಾಮಿ ಹೊಣೆಗೇಡಾಗಿ
ಬಿಡದೆ ರಕ್ಷಿಪನು ಇದಕೆ ಸಂಶಯವಿಲ್ಲ ॥೨॥

ನವಿಲಿಗೆ ಚಿತ್ರ ಬರೆದವರು ಯಾರು
ಪವಳದ ಲತೆಗೆ ಕೆಂಪಿಟ್ಟವರು ಯಾರು
ಸವಿಮಾತಿನರಗಿಳಿಗೆ ಹಸುರು ಬರೆದವರು ಯಾರು
ಅವನೆ ಸಲಹುವನು ಇದಕೆ ಸಂಶಯವಿಲ್ಲ ॥೩॥

ಕಲ್ಲಿನಲಿ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರ ತಂದೀವರಾರು
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ॥೪॥



**ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ**

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ॥ಪ॥
ನೀ ದೇಹದೊಳಗೊ ನಿನ್ನೊಳು ದೇಹವೊ ಹರಿಯೆ ॥ಅ॥

ಬಯಲೊಳಗೆ ಆಲಯವೊ ಆಲಯದೊಳಗೆ ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥೧॥
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆ ಎರಡು ಜಿಹ್ವೆಯೊಳಗೊ
ಜಿಹ್ವೆ ಮನಸಿನ ಒಳಗೊ ಮನಸು ಜಿಹ್ವೆಯ ಒಳಗೊ
ಜಿಹ್ವೆ ಮನಸುಗಳೆರಡು ನಿನ್ನೊಳಗೊ ಹರಿಯೆ ॥೨॥

ಕುಸುಮದಲಿ ಗಂಧವೋ ಗಂಧದಲಿ ಕುಸುಮವೋ
ಕುಸುಮ ಗಂಧಗಳೆರಡು ಆಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿಕೇಶವರಾಯ
ಉಸುರಲೆನ್ನಳವಲ್ಲ ಎಲ್ಲ ನಿನ್ನೊಳಗೊ ಹರಿಯೆ ॥೩॥

**ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ**

ಕುಲ ಕುಲ ಕುಲವೆನ್ನುತಿಹರು ॥ಪ॥
ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ॥ಅ॥

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವ
ವಸುಧೆಯೊಳಗೆ ಭೂಸುರರುಣಲಿಲ್ಲವೆ ॥೧॥

ಮೃಗಗಳ ಮೈಯಲಿ ಪುಟ್ಟಿದ ಕತ್ತುರಿಯ
ತೆಗೆದು ಪೂಸುವರು ದ್ವಿಜರೆಲ್ಲರು

ಒಗೆಯಿಂದ ನಾರಾಯಣನ್ಯಾವ ಕುಲ
ಅಗಜವಲ್ಲಭನ್ಯಾತರ ಕುಲದವನು ॥೨॥

ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮ ನೆಲೆಯಾದಿಕೇಶವನು
ಆತನೊಲಿದ ಮೇಲೆ ಯಾತರ ಕುಲವಯ್ಯ ॥೩॥

**ಯಾತರವನೆಂದುಸರಲಿ**

ಯಾತರವನೆಂದುಸರಲಿ–ಜಗ
ನ್ನಾಥ ಮಾಡಿದ ಒಂದು ನರರೂಪವಯ್ಯ ॥ಪ॥
ಮುಟ್ಟು ಹುಟ್ಟಿನೊಳು ನೆಟ್ಟನೆ ನಾ ಬಂದೆ
ತೊಟ್ಟಿದ್ದೆನಾಗ ತೊಗಲಬಕ್ಕಣ
ಇಷ್ಟರೊಳಗೆ ಒಂದು ವಿವರವರಿಯದಿಂಥ
ಭ್ರಷ್ಟಗೆ ನನಗಿನ್ಯಾತರ ಕುಲವಯ್ಯ ॥೧॥

ಇಂದ್ರಿಯ ಸೂತಕ ದುರ್ಗಂಧವ ಮಲಮೂತ್ರ
ನಿಂದ ಠಾವಲಿ ತನ್ನ ನಿಜವರಿಯದೆ
ಬಂದದ್ದು ಬಚ್ಚಲಗುಣಿ ತಿಂದದ್ದು ಮೊಲೆ ಮಾಂಸ–ಇಂಥ
ಅಂಧಕಗೆ ನನಗಿನ್ಯಾತರ ಕುಲವಯ್ಯ ॥೨॥

ಒಂಬತ್ತು ಎಜ್ಜದೊಳೊಸರುವ ಹೊಲಸದು
ತುಂಬಿ ತುಳುಕುವ ಕೊಡವಾಗಿರಲು
ಇಂಬಿಲ್ಲದೆ ಹೊಲೆಗೊಂಡ ಠಾವಿನಲಿ ಬಂದಂಥ
ಡಂಬಕ ನನಗಿನ್ಯಾತರ ಕುಲವಯ್ಯ ॥೩॥

ಕರುಳು ಖಂಡ ನಾರುವ ಚರ್ಮರೋಹಿತ
ನರಪಂಜರದೀ ಹುರುಳಿಲ್ಲದ
ನರದೇಹ ಹೊತ್ತು ತಿರುಗವಂಥ
ತಿರುಕ ನನಗಿನ್ಯಾತರ ಕುಲವಯ್ಯ ॥೪॥

ಹಚ್ಚಡದ ಮೇಲೆ ಲಚ್ಚಿಕೆಯಿಟ್ಟಂತೆ
ಹೆಚ್ಚು ಕಡಮೆ ಎಂದು ಹೆಣಗಾಡುತ
ನಿಚ್ಚ ಕಾಗಿನೆಲೆಯಾದಿಕೇಶವನ ಭಜಿಪ
ಹುಚ್ಚಗೆ ನನಗಿನ್ಯಾತರ ಕುಲವಯ್ಯ ॥೫॥

**ದಾಸದಾಸರ ಮನೆಯ ದಾಸ ನಾನು**

ದಾಸದಾಸರ ಮನೆಯ ದಾಸಿಯರ ಮಗ ನಾನು
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ ॥ಪ॥

ಶಂಕುದಾಸರ ಮನೆಯ ಮಂಕುದಾಸನು ನಾನು
ಮಂಕುದಾಸನು ನಾನು ಮರುಳದಾಸ
ಸಂಕೀರ್ತನೆಯ ಮಾಡಿ ನೆನೆವ ಭಕ್ತರ ಮನೆಯ
ಬಿಂಕದಿ ಬಾಗಿಲ ಕಾಯ್ವ ಬಡ ದಾಸ ನಾನಯ್ಯ ॥೧॥

ಕಾಳಿದಾಸರ ಮನೆಯ ಕೀಳುದಾಸನು ನಾನು
ಆಳುದಾಸನು ನಾನು ಮೂಳದಾಸ
ಫಾಲಾಕ್ಷಸಖ ನಿನ್ನ ಭಜಿಪ ಭಕ್ತರ ಮನೆಯ
ಆಳಿನಾಳಿನ ದಾಸ ಅಡಿದಾಸ ನಾನಯ್ಯ ॥೨॥

ಹಲವು ದಾಸರ ಮನೆಯ ಹೊಲೆಯ ದಾಸನು ನಾನು
ಕುಲವಿಲ್ಲದ ದಾಸ ಕುರುಬ ದಾಸ
ಛಲದಿ ನಿನ್ನ ಭಜಿಪರ ಮನೆಯ ಮಾದಿಗ ದಾಸ
ಸಲೆ ಮುಕ್ತಿ ಪಾಲಿಸೆನ್ನೊಡೆಯ ಕೇಶವನೆ ॥೩॥

**ಅಡಿಗೆಯನು ಮಾಡಬೇಕಣ್ಣ**

ಅಡಿಗೆಯನು ಮಾಡಬೇಕಣ್ಣ–ನಾನೀಗ ಜ್ಞಾನ
ದಡಿಗೆಯನು ಮಾಡಬೇಕಣ್ಣ ॥ಪ॥

ಅಡಿಗೆಯನ್ನು ಮಾಡಬೇಕು
ಮಡಿಸಬೇಕು ಮದಗಳನ್ನು
ಒಡೆಯನಾಜ್ಞೆಯಿಂದ ಒಳ್ಳೆ
ಸಡಗರದಲಿ ಮನೆಯ ಸಾರಿಸಿ ॥ಅ॥

ತನ್ನ ಗುರುವನ್ನು ನೆನೆಯಬೇಕಣ್ಣ
ತನುಭಾವವೆಂಬ ಭಿನ್ನ ಕಲ್ಮಶವಳಿಯಬೇಕಣ್ಣ
ಒನಕೆಯಿಂದ ಕುಟ್ಟಿಕೇರಿ ತನಗೆ ತಾನೆ ಆದ ಕೆಚ್ಚ
ನನುವರಿತು ಇಕ್ಕಬೇಕು ಅರಿವರ್ಗವೆಂಬ ತುಂಟರಳಿಸಿ ॥೧॥

ತತ್ವಭಾಂಡವ ತೊಳೆಯಬೇಕಣ್ಣ–ಸತ್ಯಾತ್ಮನಾಗಿ
ಅರ್ತಿ ಅಕ್ಕಿಯ ಮಥಿಸಬೇಕಣ್ಣ
ಕತ್ತರಿ ಮನವೆಂಬ ಹೊಟ್ಟನು ಎತ್ತಿ ಒಲೆಗೆ ಹಾಕಿ ಇನ್ನು
ಮುತ್ತಿಕೊಂಡಿಹ ಮಮತೆಯನ್ನು ಎತ್ತಿ ಎಸರ ಹಿಂಗಿಸುತಲಿ ॥೨॥
ಜನನ ಸೊಂಡಿಗೆ ಹುರಿಯಬೇಕಣ್ಣ–ನಿಜವಾಗಿ ನಿಂತು
ತನುವು ತುಪ್ಪವ ಕಾಸಬೇಕಣ್ಣ
ಕನಕಗಿರಿ ಕಾಗಿನೆಲೆಯಾದಿಕೇಶವನ ದಾಸ
ಕನಕನ ಕಟ್ಟಳೆಯೊಳು ನಿಂತು ಸುಖದ ಪಾಕವ ಚಂದದಿ ಸವಿದುಣ್ಣಲಿಕ್ಕೆ ॥೩॥

**ಡೊಂಕು ಬಾಲದ ನಾಯಕರೆ**

ಡೊಂಕು ಬಾಲದ ನಾಯಕರೆ ನೀವೇನೂಟವ ಮಾಡಿದಿರಿ ॥ಪ॥

ಕಣಕ ಕುಟ್ಟೋ ಅಲ್ಲಿಗೆ ಹೋಗಿ ಹಣಿಕಿ ಇಣಿಕಿ ನೋಡುವಿರಿ
ಕಣಕ ಕುಟ್ಟೋ ಒನಕಿಲಿ ಹೊಡೆದರೆ ಕುಯ್ ಕುಯ್ ರಾಗವ ಪಾಡುವಿರಿ ॥೧॥

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಲಿ ಹೊಡೆದರೆ ಕುಯ್ ಕುಯ್ ರಾಗವ ಪಾಡುವಿರಿ ॥೨॥

ಹಿರಿಯ ಹಾದಿಲಿ ಓಡುವಿರಿ ಕರಿಯ ಬೂದಿಲಿ ಹೊರಳುವಿರಿ
ಸಿರಿ ಕಾಗಿನೆಲೆಯಾದಿಕೇಶವನ ಸ್ಮರಿಸದವರ ಗತಿ ತೋರುವಿರಿ ॥೩॥



**ಎಲ್ಲಾರು ಮಾಡುವುದು ಹೊಟ್ಟೆಗಾಗಿ**

ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ॥ಪ॥

ವೇದಶಾಸ್ತ್ರ ಪಂಚಾಂಗವ ಓದಿಕೊಂಡು ಅನ್ಯರಿಗೆ
ಬೋಧನೆಯ ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ ॥೧॥

ಚಂಡಭಟರಾಗಿ ನಡೆದು ಕತ್ತಿ ಢಾಲು ಕೈಲಿ ಹಿಡಿದು
ಖಂಡ ತುಂಡ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೨॥

ಅಂಗಡಿ ಮುಂಗಟ್ಟನ್ಹೂಡಿ ವ್ಯಂಗ್ಯ ಮಾತುಗಳನ್ನಾಡಿ
ಭಂಗ ಬಿದ್ದು ಗಳಿಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೩॥

ಕುಂಟೆ ತುದಿಗೆ ಕೊರಡು ಹಾಕಿ ಹೆಂಟೆ ಮಣ್ಣು ಸಮನು ಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೪॥
ಬೆಲ್ಲದಂತೆ ಮಾತನಾಡಿ ಎಲ್ಲರನ್ನು ಮರುಳು ಮಾಡಿ
ಸುಳ್ಳು ಬೊಗಳಿ ತಿಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೫॥

ಕೊಟ್ಟಣವನು ಕುಟ್ಟಿಕೊಂಡು ಕಟ್ಟಿಗೆಯನು ಹೊತ್ತುಕೊಂಡು
ಕಷ್ಟ ಮಾಡಿ ಉಣ್ಣುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೬॥

ತಾಳ ದಂಡಿಗೆ ಶ್ರುತಿ ಮೇಳ ತಂಬೂರಿಯ ಹಿಡಿದುಕೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೭॥

ಸಂನ್ಯಾಸಿ ಜಂಗಮ ಜೋಗಿ ಜಟ್ಟಿ ಮೊಂಡ ಬೈರಾಗಿ
ನಾನಾ ವೇಷಗಳೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೮॥

ಹಳ್ಳದಲ್ಲಿ ಕುಳಿತುಕೊಂಡು ಕಲ್ಲು ದೊಣ್ಣೆ ಹಿಡಿದುಕೊಂಡು
ಕಳ್ಳತನವ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೯॥

ಅಂದಣ ಪಲ್ಲಕ್ಕಿ ಏರಿ ಮಂದಿ ಮಾರ್ಬಲ ಕೂಡಿ
ಚಂದದಿಂದ ಮೆರೆಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥೧೦॥

ಉನ್ನತ ಕಾಗಿನೆಲೆಯಾದಿಕೇಶವನಾ ಧ್ಯಾನವನ್ನು
ಮನಮುಟ್ಟಿ ಮಾಡುವುದು ಮುಕ್ತಿಗಾಗಿ ಆನಂದಕಾಗಿ ॥೧೧॥

**ತೊರೆದು ಜೀವಿಸಬಹುದೆ**

ತೊರೆದು ಜೀವಿಸಬಹುದೆ ಹರಿ ನಿನ್ನ ಚರಣವನು
ಬರಿಯ ಮಾತೇಕಿನ್ನು ಅರಿತು ಪೇಳುವೆನಯ್ಯ ॥ಪ॥

ತಾಯಿ ತಂದೆಯ ಬಿಟ್ಟು ತಪವ ಮಾಡಲುಬಹುದು
ದಾಯಾದಿ ಬಂಧುಗಳ ಬಿಡಲು ಬಹುದು
ರಾಯ ಮುನಿದರೆ ಮತ್ತೆ ರಾಜ್ಯವನು ಬಿಡಬಹುದು
ಕಾಯಜ ಪಿತ ನಿನ್ನಡಿಯ ಬಿಡಲಾಗದು ॥೧॥
ಒಡಲು ಹಸಿಯಲು ಅನ್ನವಿಲ್ಲದೆಲೆ ಇರಬಹುದು
ಪಡೆದ ಕ್ಷೇತ್ರವ ಬಿಟ್ಟು ಪೋಗಬಹುದು
ಮಡದಿ ಮಕ್ಕಳ ಕಡೆಗೆ ತೊಲಗಿಸಿಯು ಬಿಡಬಹುದು
ಕಡಲೊಡೆಯ ನಿನ್ನಡಿಯ ಗಳಿಗೆ ಬಿಡಲಾಗದು ॥೨॥

ಪ್ರಾಣವನು ಪರರು ಬೇಡಿದರೆತ್ತಿ ಕೊಡಬಹುದು
ಮಾನಾಭಿಮಾನ ತಗ್ಗಿಸಲು ಬಹುದು
ಪ್ರಾಣನಾಯಕನಾದ ಆದಿಕೇಶವರಾಯ
ಜಾಣ ಶ್ರೀಕೃಷ್ಣ ನಿನ್ನಡಿಯ ಬಿಡಲಾಗದು ॥೩॥

**ತನು ನಿನ್ನದು ಜೀವನ ನಿನ್ನದು**

ತನು ನಿನ್ನದು ಜೀವನ ನಿನ್ನದು ರಂಗ ॥ಪ॥
ಅನುದಿನದಲಿ ಬಾಹೊ ಸುಖದುಃಖ ನಿನ್ನದಯ್ಯ ॥ಅ॥

ಸವಿನುಡಿ ವೇದ ಪುರಾಣ ಶಾಸ್ತ್ರಂಗಳ
ಕಿವಿಗೊಟ್ಟು ಕೇಳುವ ಕಥೆ ನಿನ್ನದು
ನವಮೋಹನಾಂಗಿಯರ ರೂಪವನು ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯ ॥೧॥

ಒಡಗೂಡಿ ಗಂಧ ಕಸ್ತೂರಿ ಪರಿಮಳಂಗಳ
ಬಿಡದೆ ಲೇಪಿಸಿಕೊಂಬುವುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡು ರುಚಿಗೊಂಡರಾ ರುಚಿ ನಿನ್ನದಯ್ಯ ॥೨॥

ಮಾಯಾ ಪಾಶದ ಬಲೆಯೊಳಗೆ ಸಿಲುಕಿರುವ
ಕಾಯ ಪಂಚೇಂದ್ರಿಯಂಗಳು ನಿನ್ನವು
ಕಾಯಜಪಿತ ಕಾಗಿನೆಲೆಯಾದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ ॥೩॥

**ಆರು ಹಿತವರು ಎಂದು ನಂಬಬೇಡ**

ಆರು ಹಿತವರು ಎಂದು ನಂಬಬೇಡ ॥ಪ॥
ಅರಿಗಾರಿಲ್ಲ ಆಪತ್ತು ಬಂದೊದಗಿದಡೆ ॥ಅ॥
ಜನಕ ಹಿತದವನೆಂದು ನಂಬಬಹುದೇ ಹಿಂದೆ
ತನಯ ಪ್ರಹ್ಲಾದನಿಗೆ ಪಿತ ಮುನಿದನು
ಜನನಿ ರಕ್ಷಿಪಳೆಂಬೆನೇ ತಿಳಿತಿಳಿದು ಕುಂತಿ
ತನಯ ರಾಧೇಯನಿಗೆ ಎರಡೆಣಿಸಿದ ಮೇಲೆ ॥೧॥

ಮಗನು ತೆತ್ತಿಗನೆನಲೆ ಕಂಸ ತನ್ನಯ ಪಿತನ
ನಿಗಳ ಬಂದನದಿಂದ ಬಂಧಿಸಿದನು
ಜಗವರಿಯೆ ಸೋದರನು ಮಮತೆಯುಳ್ಳವನೆನಲೆ
ಹಗೆವೆರಸಿ ವಾಲಿಯನು ಅನುಜ ಕೊಲಿಸಿದ ಮೇಲೆ ॥೨॥

ತನಗೆ ದೇಹಾನುಬಂಧಿಗಳೆ ಬಂಧುಗಳೆಂದು
ಮನದಿ ನಿಚ್ಚಳವಾಗಿ ನಂಬಬೇಡ

ಘನ ಕೃಪಾನಿಧಿ ಕಾಗಿನೆಲೆಯಾದಿಕೇಶವನ
ಅನುದಿನದಿ ನಂಬಿದವಗಿಹಪರದಿ ಸುಖವು ॥೩॥

**ದಾನಧರ್ಮವ ಮಾಡಿ ಸುಖಿಯಾಗು ಮನವೆ**

ದಾನಧರ್ಮವ ಮಾಡಿ ಸುಖಿಯಾಗು ಮನವೆ ॥ಪ॥
ಹೀನ ವೃತ್ತಿಯಲಿ ನೀ ಕೆಡಬೇಡ ಮನವೆ ॥ಅ॥

ಎಕ್ಕನಾತಿ ಯಲ್ಲಮ್ಮ ಮಾರಿ ದುರ್ಗಿ ಚೌಡಿಯ
ಅಕ್ಕರಿಂದಲಿ ಪೂಜೆ ಮಾಡಲೇಕೆ
ಗಕ್ಕನೆಯೆ ಯಮನ ದೂತರೆಳೆದೊಯ್ಯುವಾಗ
ಶಕ್ತೇರು ಬಿಡಿಸಿಕೊಂಡಾರೇನೊ ಮರುಳೆ ॥೧॥

ಸಂಭ್ರಮದಲಿ ಒಂದ್ಹೊತ್ತು ನೇಮದೊಳಗಿದ್ದು
ತಂಬಿಟ್ಟಿನಾ ದೀಪ ಹೊರಲೇತಕೆ
ಕೊಂಬು ಹೋತು ಕುರಿ ಕೋಣಗಳನ್ನು ಬಲಿಗೊಂಬ
ದೊಂಬಿ ದೈವಗಳ ಭಜಿಸದಿರು ಮನವೆ ॥೨॥

ಚಿಗುರೆಲೆ ಬೇವಿನ ಸೊಪ್ಪುಗಳ ನಾರಸೀರೆ
ಬಗೆಬಗೆಯಿಂದ ಶೃಂಗಾರ ಮಾಡಿ
ನೆಗೆನೆಗೆದಾಡುತ ಕುಣಿಯುತಿರೆ ನಿನಗಿನ್ನು
ಮಿಗಿಲಾದ ಮುಕ್ತಿಯುಂಟೇ ಹುಚ್ಚು ಮನವೆ ॥೩॥

ದಾನಧರ್ಮ ಪರೋಪಕಾರವ ಮಾಡು
ದೀನನಾಗಿ ನೀ ಕೆಡಬೇಡವೊ
ಜ್ಞಾನವಿಲ್ಲದೆ ಹೀನ ದೈವವ ಭಜಿಸಿದರೆ
ಏನುಂಟು ನಿನಗಿನ್ನು ಎಲೆ ಹುಚ್ಚು ಮನವೆ ॥೪॥

ನರಲೋಕದಲಿ ಯಮನ ಬಾಧೆಯನು ಕಳೆಯಲು
ವರ ಪುಣ್ಯ ಕಥೆಗಳನು ಕೇಳುತಲಿ



ಸಿರಿ ಕಾಗಿನೆಲೆಯಾದಿ ಕೇಶವನ ನೆರೆ ನಂಬಿ
ಸ್ಥಿರ ಪದವಿಯನು ಪಡೆ ಹುಚ್ಚು ಮನವೆ ॥೫॥

**ಬಾಗಿಲನು ತೆರೆದು**

ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ
ಕೂಗಿದರು ಧ್ವನಿ ಕೇಳಲಿಲ್ಲವೇ ನರಹರಿಯೇ ॥ಪ॥

ಪರಮಪದದೊಳಗೆ ವಿಷಧರನ ತಲ್ಪದಲಿ ನೀ
ಸಿರಿಸಹಿತ ಕ್ಷೀರವಾರಿಧಿಯೊಳಿರಲು
ಕರಿರಾಜ ಕಷ್ಟದಲಿ ಆದಿಮೂಲಾ ಎಂದು
ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ ॥೧॥

ಕಡುಕೋಪದಿಂದ ಖಳನು ಖಡುಗವನು ಪಿಡಿದು ನಿ
ನ್ನೊಡೆಯನೆಲ್ಲಿಹನೆಂದು ಜಡಿದು ನುಡಿಯೆ
ದೃಢ ಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ
ಸಡಗರದಿ ಕಂಬದಿಂದೊಡೆದೆ ನರಹರಿಯೆ ॥೨॥

ಯಮಸುತನ ರಾಣಿಗಕ್ಷಯ ವಸನವನ್ನಿತ್ತೆ
ಸಮಯದಲಿ ಅಜಮಿಳನ ಪೊರೆದೆ
ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ
ಕಮಲಾಕ್ಷ ಕಾಗಿನೆಲೆಯಾದಿಕೇಶವನೆ ॥೩॥

**ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ**

ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ
ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ ॥ಪ॥

ತಾನು ಉಣ್ಣದ ಪರರಿಗಿಕ್ಕದ ಧನವಿದ್ಯಾತಕೆ
ಮಾನ ಹೀನನಾಗಿ ಬಾಳ್ವ ಮನುಜನ್ಯಾತಕೆ

ಜ್ಞಾನವಿಲ್ಲದೆ ನೂರುಕಾಲ ಬದುಕಲ್ಯಾತಕೆ
ಮಾನಿನಿಯ ತೊರೆದ ಮೇಲೆ ಭೋಗವ್ಯಾತಕೆ ॥೧॥

ಮಾತು ಕೇಳದೆ ಮಲೆತು ನಡೆವ ಮಕ್ಕಳ್ಯಾತಕೆ
ಪ್ರೀತಿಯಿಲ್ಲದೆ ಎಡೆಯಲಿಕ್ಕಿದ ಅನ್ನವ್ಯಾತಕೆ
ನೀತಿಯರಿತು ನಡೆಯದಿರುವ ಬಂಟನ್ಯಾತಕೆ
ಸೋತ ಹೆಣ್ಣಿಗೆ ಓತು ನಡೆಯದ ಪುರುಷನ್ಯಾತಕೆ ॥೨॥

ಸನ್ನೆಯರಿತು ನಡೆಯದಿರುವ ಸತಿಯು ಯಾತಕೆ
ಮನ್ನಣಿಂದೆ ನಡೆಸದಿರುವ ದೊರೆಯು ಯಾತಕೆ
ಮುನ್ನ ಕೊಟ್ಟು ಪಡೆಯದಿನ್ನು ಬಯಸಲ್ಯಾತಕೆ
ಚೆನ್ನ ಆದಿಕೇಶವನಲ್ಲದ ದೈವವ್ಯಾತಕೆ ॥೩॥

**ನಾನು ನೀನು ಎನ್ನದಿರು**

ನಾನು ನೀನು ಎನ್ನದಿರು ಹೀನ ಮಾನವ ॥ಪ॥
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ ॥ಅ॥
ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನಲೊ
ಅನ್ನದಿಂದ ಬಂದ ಕಾಮ ನಿನ್ನದೇನೆಲೊ
ಕರ್ಣದಿಂದ ಬರುವ ಘೋಷ ನಿನ್ನದೇನೆಲೊ
ನಿನ್ನ ಬಿಟ್ಟು ಹೋಹ ದೇಹ ನಿನ್ನದೇನಲೊ ॥೧॥

ಹಲವು ಜನ್ಮದಿಂದ ಬಂದಿರುವವನು ನೀನೆಲೊ
ಮಲದ ಗರ್ಭದಲಿ ನಿಂದಿರುವವನು ನೀನೆಲೊ
ಜಲದ ದಾರಿಯಲಿ ಬಂದಿರುವವನು ನೀನೆಲೊ
ಕುಲವು ಜಾತಿ ಗೋತ್ರವುಳ್ಳವನು ನೀನೆಲೊ ॥೨॥

ಕಾಲಕರ್ಮ ಶೀಲನೇಮ ನಿನ್ನದೇನೆಲೊ
ಜಾಲವಿದ್ಯೆ ಬಯಲ ಮಾಯೆ ನಿನ್ನದೇನೆಲೊ
ಕೀಲು ಜಡಿದ ತೊಗಲಗೊಂಬೆ ನಿನ್ನದೇನೆಲೊ
ಲೋಲ ಆದಿಕೇಶವನ ಭಕ್ತನಾಗೆಲೊ ॥೩॥



**ಆನೆ ಬಂದಿದೆ**

ಆನೆ ಬಂದಿದೆ ಇದಿಗೊ ಮದ್ದಾನೆ ॥ಪ॥
ಜ್ಞಾನಿಗಳೊಳಾಡುವ ಮದ್ದಾನೆ ॥ಅ॥

ದೇವಕಿಯೊಳು ಪುಟ್ಟಿದಾನೆ–ವಸು
ದೇವನ ಪೆಸರೊಳೈತಂದ ಮದ್ದಾನೆ
ಶ್ರೀ ವಾಸುದೇವನೆಂಬಾನೆ–ಗೋಪಿ
ದೇವಿಯ ಗೃಹದೊಳಾಡುವ ಪುಟ್ಟಾನೆ ॥೧॥

ನೀಲವರ್ಣದ ನಿಜದಾನೆ–ಸ್ವರ್ಣ
ಮಾಲೆಗಳಿಟ್ಟು ಮೆರೆವ ಚಲುವಾನೆ
ಶ್ರೀಲೋಲನೆನಿಪ ಪಟ್ಟದಾನೆ–ದುಷ್ಟ
ಕಾಳಿಂಗನ ಪೆಡೆಯ ಮೆಟ್ಟಿ ತುಳಿದಾನೆ ॥೨॥

ಬಾಲೇಂದು ಮುಖದ ಮರಿಯಾನೆ–ಕದ್ದು
ಪಾಲನ್ನು ಕುಡಿದ ಮರಿಯಾನೆ
ಕೈಲಿ ಗಿರಿಯನೆತ್ತಿದಾನೆ
ಕಾಳ್ಗಿಚ್ಚನ್ನು ನುಂಗಿದ ಪಟ್ಟದಾನೆ ॥೩॥

ಧೇನುಕಾಸುರನ ಕೊಂದಾನೆ
ತನಗೆ ಜೋಡಿಲ್ಲದಿಹ ನಿಜದಾನೆ
ಮಾನವರಿಗೆಲ್ಲ ಸಿಲ್ಕದಾನೆ
ಶೌನಕಾದಿಗಳೊಂದಿಗಿಪ್ಪಾನೆ ॥೪॥

ಮಲ್ಲರೊಡನೆ ಗೆಲಿದಾನೆ–ಕಡು
ಖುಲ್ಲ ಕಂಸನ ಕೆಡಹಿದಾನೆ–ವಿದ್ಯೆ ಸಾಂದೀಪ
ರಲಿ ಕಲಿತ ಮರಿಯಾನೆ
ಸಲೆ ಭಕ್ತರ ಕಾವ ಪುಟ್ಟಾನೆ ॥೫॥

ತರಳೆ ರುಕ್ಮಿಣಿಯ ತಂದಾನೆ–ಬಹು
ಕರುಣದಿಂ ಪಾಂಡವರ ಪೊರೆದಾನೆ
ವರ ವೇಲಾಪುರದೊಳಿಪ್ಪಾನೆ
ಸಿರಿಯಾದಿಕೇಶವನೆಂಬ ಮದ್ದಾನೆ ॥೬॥



## ಮುಂಡಿಗೆಗಳು

ಒಗಟಿನ ರೂಪದ ಕೀರ್ತನೆಗಳಿಗೆ ಮುಂಡಿಗೆಗಳು ಎಂದು ಹೆಸರು. ಮುಂಡಿಗೆ ಶಬ್ದಕ್ಕೆ 'ಕಟ್ಟಿಗೆಯ ದೊಡ್ಡತೊಲೆ' ಎಂಬ ಅರ್ಥವಿದೆ. ಎತ್ತಲು ಕಷ್ಟಸಾಧ್ಯವೆಂಬ ಹಿನ್ನೆಲೆಯಲ್ಲಿ ಒಗಟು ಪದ್ಯಗಳಿಗೆ ಈ ಪದಪ್ರಯೋಗ ರೂಢಿಗೆ ಬಂದಿರಬಹುದು. ಕನಕದಾಸರು ಇಂತಹ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪಾರಿಹಾರಿಕಿ, ಒಗಟು, ರೂಪಕ ನಿರ್ಮಿತಿ, ಅನ್ಯೋಕ್ತಿವಿಧಾನ, ಭಾಷಿಕ ಬೆಡಗು, ಯೋಗಶಾಸ್ತ್ರ ಪರಿಭಾಷೆ ಮುಂತಾದ ವೈವಿಧ್ಯವನ್ನು ಗುರುತಿಸಬಹುದು.

'ಈತನೀಗ ವಾಸುದೇವನು' ಎಂಬ ಮುಂಡಿಗೆಯಲ್ಲಿ ಪುರಾಣಕಥೆಗಳು ಹಾಸುಹೊಕ್ಕಾಗಿದ್ದು, ಸಂಬಂಧಗಳ ಮಾಲೆಯಿದೆ. ಈ ಚಿತ್ರಕವಿತಾಶೈಲಿಯನ್ನು 'ಪಾರಿಹಾರಿಕಿ' ಎಂದು ಕರೆಯುತ್ತಾರೆ. ಅಲ್ಲಿರುವ ಬಾಂಧವ್ಯದ ಕುಣಿಕೆಗಳನ್ನು ಬಿಡಿಸಿದಾಗ ಅರ್ಥದ ಅನಾವರಣವಾಗುತ್ತದೆ. 'ಅಂಧಕನನುಜನ ಕಂದನ ತಂದೆಯ' ಎಂಬ ಮಂಗಳಾರತಿಯ ಹಾಡು ಇದೇ ತೆರನಾದುದು. 'ಓಹೋ ಎನ ಜೀವ ಮೈಯೆಲ್ಲ ನವಗಾಯ', 'ಸದರವಲ್ಲವೊ ನಿಜಯೋಗ' ಈ ಮುಂಡಿಗೆಗಳಲ್ಲಿ ಅಷ್ಟಾಂಗಯೋಗದ ವಿವರಗಳಿವೆ. ಮೂಲಾಧಾರಚಕ್ರದಿಂದ ಸಹಸ್ರಾರದವರೆಗೆ ಏರುವ ಕುಂಡಲಿನೀಶಕ್ತಿಯ ಪ್ರವಾಹವನ್ನು ರೂಪಕಗಳ ಮೂಲಕ ಇಲ್ಲಿ ಸೂಚಿಸಲಾಗಿದೆ. 'ಮುಳ್ಳು ಮೊನಿಯ ಮ್ಯಾಲ ಮೂರು ಕೆರೆಯ ಕಟ್ಟಿ' ಶುದ್ಧಾಂಗ ಅನ್ಯೋಕ್ತಿ ವಿಧಾನದ ರಚನೆ. ಇಲ್ಲಿಯ ಸಂಖ್ಯಾಸೂಚಕಗಳಿಗೆ ಬೇರೆ ಅರ್ಥಗಳನ್ನು ಆರೋಪಿಸಿದರಷ್ಟೇ ಮುಂಡಿಗೆಯ ಅರ್ಥಸಿದ್ಧಿಸುವುದು.

ಒಗಟುಗಳಂತೆ ಕಾಣಿಸುವ ಇನ್ನೂ ಕೆಲವು ಮುಂಡಿಗೆಗಳು ಕನಕದಾಸರ ಕವಿಪ್ರತಿಭೆಗೆ ನಿದರ್ಶನವಾಗಿದೆ. 'ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ' ಎನ್ನುವುದು ಬೀಸುವ ಕಲ್ಲಿನ ಕುರಿತಾದುದು. ಹಾಗೆಯೇ 'ಕೆಂಪುಮೂಗಿನ ಪಕ್ಷಿ' ಎಂದರೆ ರಜೋಗುಣದಲ್ಲಿ ಮುಳುಗಿದ ಮನಸ್ಸು ಎಂದರ್ಥ. 'ಮುತ್ತುಗಳಾ ಹಣ್ಣು ಕಾಯಾದ ಬಳಿಕಿನ್ನು' ಸತ್ತವರು ಮರುಹುಟ್ಟಿ ಬರುವುದರ ಸೂಚನೆ. 'ಸೀತಾಪತಿ ರಘುನಾಥನೆಂಬಾತನು' ಎಂಬ ರಚನೆಯಲ್ಲಿ ಮತ್ಸ್ಯಕೂರ್ಮಾದಿ ದಶಾವತಾರಗಳನ್ನು ನಿರೂಪಿಸಲಾಗಿದೆ. 'ಪರಮಪುರುಷ ನೀನೆಲ್ಲಿ ಕಾಯಿ' ಒಂದು ವಿಶಿಷ್ಟರಚನೆ. ಹಲವಾರು ತರಕಾರಿಗಳ ಹೆಸರುಗಳು ಬಂದರೂ, ಅವುಗಳ ಉದ್ದೇಶಿತ ಅರ್ಥ ಬೇರೆಯಾಗಿರುವುದು

ಕನ್ನಡ ಭಾಷೆಯ ಅನುಪಮ ಸಿದ್ಧಿ. ಆಳವಾದ ಅಧ್ಯಯನದಿಂದ ಮಾತ್ರ ಕನಕದಾಸರ ಮುಂಡಿಗೆಗಳು ತೆರೆದುಕೊಳ್ಳುತ್ತವೆ. ಇದರಿಂದಾಗಿ ಕನ್ನಡದ ಕಾವ್ಯಾಭಿವ್ಯಕ್ತಿಯಲ್ಲಿ ಕನಕ ಮುಂಡಿಗೆಗಳಿಗೆ ವಿಶಿಷ್ಟವಾದ ಸ್ಥಾನವಿದೆ.

**ಆಯ್ದ ಮುಂಡಿಗೆ ರೂಪದ ಕೀರ್ತನೆಗಳು:**
**ಈತನೀಗ ವಾಸುದೇವನು**

ಈತನೀಗ ವಾಸುದೇವನು ಲೋಕದೊಡೆಯ
ಈತನೀಗ ವಾಸುದೇವನು ॥ಪ॥

ಈತನೀಗ ವಾಸುದೆವನೀ ಸಮಸ್ತ ಲೋಕದೊಡೆಯ
ದೂತಗೊಲಿದು ತೇರನೇರಿ ತೇಜಿ ಪಿಡಿದು ನಡೆಸಿದಾತ ॥ಅ॥

ದನುಜೆಯಾಳ್ದನಣ್ಣನಯ್ಯನ ಪಿತನ ಮುಂದೆ ಕೌರವೇಂದ್ರ
ನನುಜೆಯಾಳಿದವನ ಶಿರವ ಕತ್ತರಿಸುತ – ತನ್ನ
ಅನುಜೆಯಾಳಿದವನ ಬೆಂಕಿ ಮುಟ್ಟದಂತೆ ಕಾಯ್ದ ರುಕ್ಮ
ನನುಜೆಯಾಳಿದವನ ಮೂರ್ತಿಯನ್ನು ನೋಡಿರೊ ॥೧॥

ನರನಸುತನರಣ್ಯದಲ್ಲಿ ಗಿರಿಯೊಳ್ನಿಂತು ತನ್ನ ರೋಷದಿ
ಶರಗಳನ್ನು ತೀಡುತಿಪ್ಪನ ಯೋಚಿಸಿ
ಭರದಲವನ ಕರೆದು ಕುರುಹು ತೋರಿ ಪತ್ರವನ್ನು ಹಾರಿಸಿದವನ
ಶಿರವನ್ನು ಛೇದಿಸಿದ ದೇವ ಕಾಣಿರೊ ॥೨॥

ಸೃಷ್ಟಿಕರ್ತಗೆ ಮಗನಾದವನಿಗಿಷ್ಟ ಭೂಷಣ ಅಶನವಾದನ
ಜ್ಯೇಷ್ಠ ಪುತ್ರಗೆ ವೈರಿ ತೊಡೆಯ ಛೇದಿಸೆಂದು ಬೋಧಿಸಿ
ಕಷ್ಟವನ್ನು ಕಳೆದು ಭಕ್ತರಿಷ್ಟವನ್ನು ಕಾದ ಉ
ತ್ಕೃಷ್ಟ ಮಹಿಮನಾದ ದೇವ ಕಾಣಿರೊ ॥೩॥

ಕ್ರೂರವಾದ ಫಣಿಪಬಾಣವನ್ನು ತರಣಿಜನೆಚ್ಚಾಗ
ವೀರನರನತ್ತ ಬಪ್ಪುದನ್ನು ಈಕ್ಷಿಸಿ
ಧಾರಿಣಿಯ ಪದದೊಳೌಕಿ ಚರಣಭಜಕ ನರನ ಕಾಯ್ದ



ಭಾರಕರ್ತನಾದ ದೇವನೀತ ಕಾಣಿರೊ ॥೪॥
ವ್ಯೋಮಕೇಶನಿಪ್ಪ ದೆಸೆಯ ಸರ್ವ ಜಗಕೆ ತೋರುತ
ಸಾಮಜವನೇರಿ ಬಹನ ಶಕ್ತಿಯನೀಕ್ಷಿಸಿ
ಪ್ರೇಮದಿಂದ ಉರವನೊಡ್ಡಿ ಡಿಂಗರಿಗನ ಕಾಯ್ದ ಸಾರ್ವ
ಭೌಮ ಬಾಡದಾದಿಕೇಶವನ್ನ ನೋಡಿರೊ ॥೫॥

**ಮಂಗಳಾರತಿಯ ಪಾಡಿರೆ ಮಾನಿನಿಯರು**

ಮಂಗಳಾರತಿಯ ಪಾಡಿರೆ ಮಾನಿನಿಯರು ॥ಪ॥

ಅಂಧಕನನುಜನ ಕಂದನ ತಂದೆಯ
ಕೊಂದನ ಶಿರದಲಿ ನಿಂದವನ
ಚಂದದಿ ಪಡೆದವನ ನಂದನೆಯಳ ನಲ
ವಿಂದ ಧರಿಸಿದ ಮುಕುಂದನಿಗೆ ॥೧॥

ರಥವನಡರಿ ಸುರ ಪಥದಲಿ ತಿರುಗುವನ
ಸುತನಿಗೆ ಶಾಪವನಿತ್ತವನ
ಖತಿಯನು ತಡೆದನ ಸತಿಯ ಜನನಿ ಸುತನ
ಸತಿಯರನಾಳಿದ ಚತುರನಿಗೆ ॥೨॥

ಹರಿಯ ಮಗನ ಶಿರ ತರಿದನ ತಂದೆಯ
ಹಿರಿಯ ಮಗನ ತಂದೆಯ ಪಿತನ
ಭರದಿ ಭುಜಿಸಿದವನ ಶಿರದಲಿ ನಟಿಸಿದ
ವರ ಕಾಗಿನೆಲೆಯಾದಿಕೇಶವಗೆ ॥೩॥

**ಓಹೊ ಎನ ಜೀವ ಮೈಯೆಲ್ಲ ನವಗಾಯ**
ಓಹೊ ಎನ ಜೀವ ಮೈಯೆಲ್ಲ ನವಗಾಯ ॥ಪ॥
ಗಾಯ ಕಟ್ಟುವರಿಲ್ಲ ಗಾಳಿ ಹಾಕುವರಿಲ್ಲ ॥ಅ॥

ಮಾಡಿಲ್ಲ ಮಳೆಯಿಲ್ಲ ಮರದ ಮ್ಯಾಲೆ ನೀರ ಕಂಡೆ
ಕಾಡು ಸುಡುವುದ ಕಂಡೆ ಬೂದಿಯ ಕಾಣಲಿಲ್ಲ ॥೧॥

ಬಿತ್ತಲಿಲ್ಲ ಬೆಳೆಯಲಿಲ್ಲ ನೆಟ್ಟು ನೀರ ತೋರಲಿಲ್ಲ
ಹೊತ್ತುಕೊಂಡು ತಿರುಗಿದೆ ರೊಕ್ಕದಾ ಪ್ರಾಣಿಯನ್ನು ॥೨॥
ಅಡಿಕೆಯಷ್ಟು ಆಕಳಣ್ಣ ಹಿಡಿಕೆಯಷ್ಟು ಕೆಚ್ಚಲಣ್ಣ
ಒಡನೆ ಕರೆದಾರ ಕರಿತೈತಿ ರಂಜಣಿಗಿ ಹಾಲಣ್ಣ ॥೩॥

ಮೂರು ಮೊಳದಾ ಬಳ್ಳಿಗೆ ಆರು ಮೊಳದ ಕಾಯಣ್ಣ
ಆರು ಹತ್ತರ ಮೊಳದ, ಕಾಯಿ ಕೊಯ್ಯುವ ಕುಡುಗೋಲಣ್ಣ ॥೪॥

ಊರ ಮುಂದೆ ಹಿರಣ್ಯಕನ ಕೊರಳ ಕೊಯ್ವುದ ಕಂಡೆ
ಕೊರಳ ಕೊಯ್ವುದ ಕಂಡೆ ರಕುತವ ಕಾಣಲಿಲ್ಲ ॥೫॥

ಕಾಗಿನೆಲೆಯ ಕನಕದಾಸ ಹೇಳಿದಂಥ ಮುಂಡಿಗೆಯ
ಮಿಗೆ ಒಳ ಹೊರಗೆಲ್ಲ ಬಲ್ಲ ಬಾಡದಾದಿ ಕೇಶವರಾಯ ॥೬॥

**ಸದರವಲ್ಲವೊ ನಿಜಯೋಗ**

ಸದರವಲ್ಲವೊ ನಿಜಯೋಗ – ಸಚ್ಚಿದಾನಂದ
ಸದಮಲ ಗುರುದಿಗಂಬರನ ಸಂಯೋಗ ॥ಪ॥

ಅಡಿಯನಂಬರ ಮಾಡದನಕ – ಅಗ್ನಿ
ಕಿಡಿಯೆದ್ದು ಮೇಲಣ ಕೊಡುನುಕ್ಕದನಕ
ಒಡಲೆರಡೊಂದಾಗದನಕ – ಅಲ್ಲಿ
ಒಡಗೂಡಿ ಅಂಗನೆ ನುಡಿಗೇಳದನಕ ॥೧॥

ನಾಡಿ ಹಲವು ಕಟ್ಟದನಕ ಬ್ರಹ್ಮ
ನಾಡಿಯೊಳು ಪೊಕ್ಕು ಮುಳುಗಾಡದನಕ
ಕಾಡುವ ಕಪಿ ಸಾಯದನಕ – ಸತ್ತ
ಓಡಿನೊಳಗೆ ರಸ ತೊಟ್ಟಿಕ್ಕದನಕ ॥೨॥

ಆದಿಕುಂಭ ಕಾಣದನಕ – ಅಲ್ಲಿ
ಸಾಧಿಸಿ ಭೇದಿಸಿ ಸವಿಯುಣ್ಣದನಕ



ಭೇದವು ಲಯವಾಗದನಕ – ಬಡ
ದಾದಿಕೇಶವ ನಿಮ್ಮ ನೆಲೆಗಾಣದನಕ ॥೩॥

**ಮುಳ್ಳು ಮೊನಿಯ ಮ್ಯಾಲ ಮೂರು ಕೆರಿಯ ಕಟ್ಟಿ**

ಮುಳ್ಳು ಮೊನಿಯ ಮ್ಯಾಲ ಮೂರು ಕೆರಿಯ ಕಟ್ಟಿ
ಎರಡು ಹೂಳು, ಒಂದು ತುಂಬಲೆ ಇಲ್ಲ ॥೧॥

ತುಂಬದ ಕೆರೆಗೆ ಮೇಯಾಕ ಬಂದವು ಮೂರು ಎಮ್ಮಿ
ಎರಡು ಗೊಡ್ಡು, ಒಂದು ಕಂದು ಹಾಕಿ ಕರುವೆ ಇಲ್ಲ ॥೨॥

ಕರುವಿಲ್ಲದ ಎಮ್ಮಿಯ ಕೂಡಿದರ ಮೂವರು ಹೆಣ್ಮಕ್ಕಳಾ
ಇಬ್ಬರು ಬಂಜಿಯರು, ಒಬ್ಬಾಕಿ ಹಡೆದೇ ಇಲ್ಲ ॥೩॥

ಹಡೆಯದ ಹೆಣ್ಣ ಕೂಡಿಕೊಂಡರು ಮೂವರು ಕುಂಬಾರರು
ಇಬ್ಬರು ಚೊಂಚರು, ಒಬ್ಬಗೆ ಕೈಯೇ ಇಲ್ಲ ॥೪॥

ಕೈಯಿಲ್ಲದ ಕುಂಬಾರ ಮಾಡಿಕೊಟ್ಟ ಮೂರು ಮಡಿಕಿಗಳ
ಎರಡು ದದ್ದು, ಒಂದಕೆ ತಳವೆ ಇಲ್ಲ ॥೫॥

ತಳವಿಲ್ಲದ ಮಡಿಕಿಗೆ ಕೊಟ್ಟಾರ ಮೂರು ರೊಕ್ಕ
ಎರಡು ನಕಲು, ಒಂದು ಸವಕಲು ॥೬॥

ಸವಕಲು ರೊಕ್ಕದಾಗ ಕುಚ್ಚಲಿಕೆ ತಂದಾರ ಮೂರು ಕಡುಬ
ಎರಡು ಕುದಿಯಲಿಲ್ಲ, ಒಂದು ಬೇಯಲಿಲ್ಲ ॥೭॥

ಬೇಯದ ಕಡುಬಿಗಿ ಬಂದಾರ ಮೂವರು ಬೀಗರ
ಇಬ್ಬರು ಬೊಚ್ಚರು, ಒಬ್ಬಗೆ ಹಲ್ಲೇ ಇಲ್ಲ ॥೮॥

ಹಲ್ಲಿಲ್ಲದ ಬೀಗನಿಗೆ ಕೊಟ್ಟಾರ ಮೂರು ಚಿಕಣಿ ಅಡಕಿ
ಎರಡು ಗೋಟು, ಒಂದು ಸಿಡಿದು ಕಾಣೆಯಾಯಿತು ॥೯॥

ಕಾಣೆಯಾದ ಅಡಿಕಿಯ ನೋಡಾಕಂತ ಹೋಗ್ಯಾರ ಮೂರ ಮಂದಿ
ಇಬ್ಬರು ಒಂಚೋರಿ, ಒಬ್ಬಗೆ ಕಣ್ಣೇ ಇಲ್ಲ ॥೧೦॥
ಕಣ್ಣಿಲ್ಲದವನ ಕರೆತರಬೇಕಂತ ಹೋಗ್ಯಾರ ಮೂರ ಮಂದಿ
ಇಬ್ಬರು ಕುಂಟರು, ಒಬ್ಬಗೆ ಕಾಲೇ ಇಲ್ಲ ॥೧೧॥

ಕಾಲಿಲ್ಲದವನ ಹೊತ್ತು ತರಬೇಕಂತ ಹೋಗ್ಯಾರ ಮೂರು ಮಂದಿ
ಇಬ್ಬರು ಲಂಡರು, ಒಬ್ಬ ಮೊಂಡ ॥೧೨॥

ಕಾಗಿನೆಲೆ ಕನಕದಾಸ ಹಾಕಿದ ಮುಂಡಿಗಿ
ಇದ ತಿಳಿದವ ಜಾಣ, ಒಡೆದು ಹೇಳದವ ಕೋಣ ॥೧೩॥

**ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ**

ಮರವ ನುಂಗುವ ಪಕ್ಷಿ ಮನೆಯೊಳಗೆ ಬಂದಿದೆ – ಇದರ
ಕುರುಹ ಪೇಳಿ ಕುಳಿತಿರುವ ಜನರು ॥ಪ॥

ಒಂಟಿ ಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ
ಗಂಟಲು ಮೂರುಂಟು ಮೂಗು ಇಲ್ಲ
ಕುಂಟು ಮನುಜನ ತೆರದಿ ಕುಳಿತಿಹುದು ಮನೆಯೊಳಗೆ
ಎಂಟು ಹತ್ತರ ಭಕ್ಷ್ಯ, ಭಕ್ಷಿಸುವುದು ॥೧॥

ನಡುವೆ ಕಲಿಯುಂಬುವುದು ನಡುನೆತ್ತಿಯಲಿ ಬಾಯಿ
ಕಡು ಸ್ವರಗಳಿಂದ ಗಾನ ಮಾಡುವುದು
ಅಡವಿಯಲಿ ಹುಟ್ಟುವುದು ಅಂಗವೆರಡಾಗುವುದು
ಬಡತನ ಬಂದರೆ ಬಹಳ ರಕ್ಷಿಪುದು ॥೨॥

ಕಂಜವದನೆಯರ ಕರದಲ್ಲಿ ನಲಿದಾಡುವುದು
ಎಂಜಲನುಣಿಸುವುದು ಮೂಜಗಕೆ
ರಂಜಿಪ ಶಿಖಾಮಣಿ ಸಿಂಹಾಸನದ ಮೇಲಿರ್ಪ
ಸಂಜೀವ ಪಿತ ಆದಿಕೇಶವನೆ ಬಲ್ಲ ॥೩॥



**ಕೆಂಪು ಮೂಗಿನ ಪಕ್ಷಿ ತಂಪಿನೊಳಿರುವುದು**

ಕೆಂಪು ಮೂಗಿನ ಪಕ್ಷಿ ತಂಪಿನೊಳಿರುವುದು
ನೆಂಪು ಬಲ್ಲವರು ಪೇಳಿ ॥ಪ॥
ಹಂಪೆಯ ವಿರೂಪಾಕ್ಷ ಲಿಂಗನಲ್ಲಿ
ಝಂಪೆಯನಾಡುತಿಹದು ॥ಅ॥

ಆರು ತಲೆ ಹದಿನಾರು ಕಣ್ಣುಗಳುಂಟು
ಮೂರು ಮೂರು ನಾಲಗೆ
ಬೇರೆ ಹನ್ನೆರಡು ಕಣ್ಣು ಕಿವಿಗಳುಂಟು
ಸೇರಿತು ತೆಂಕಲಾಗೆ ॥೧॥

ಬಲೆಯ ಬೀಸಿದರು ಸಿಕ್ಕದಾ ಮೃಗ
ಜಲದೊಳು ತಾ ನಿಲ್ಲದು
ನೆಲನ ಮೇಲಿರುವುದು ನಿಂತರೆ ಸಾವುದು
ಕುಲದೊಳಗಾಡುತಿಹುದು ॥೨॥

ಸಕಲ ಕಲೆಯು ಬಲ್ಲ ಸೀತಳ ಮಲ್ಲಿಗೆ
ಬೇರೆ ಬೇರೆನಬಹುದು
ಚೆನ್ನಕೇಶವನಲ್ಲಿ ಕೃಪೆಯುಂಟಾದರೆ
ಅಲ್ಲುಂಟು ಇಲ್ಲಿಲ್ಲವೆ॥೩॥

**ಅರ್ಥವ ತಿಳಿದು ಹೇಳಿ**

ಮುತ್ತುಗಳಾ ಹನ್ನು ಕಾಯಾದ ಬಳಿಕಿನ್ನು
ಮತ್ತೊಂದು ಚೋದ್ಯ ಕೇಳಿ
ಚಿತ್ರ ಹೂವಿನ ಹವಳ ಕಾಯಾಗುವ
ಅರ್ಥವ ತಿಳಿದು ಹೇಳಿ ॥೧॥

ಸುಟ್ಟ ಬೀಜವ ಬಿತ್ತಿ ಬೆಳೆಯ ಬಾರದ ಕಾಯಿ
ಬೆಟ್ಟದಿ ಸಾರವನು

ತೊಟ್ಟು ಇಲ್ಲದ ಹಣ್ಣ ಮುಟ್ಟಿ ಕೊಯ್ವನು ಒಬ್ಬ
ಹುಟ್ಟು ಬಂಜೆಯ ಮಗನು ॥೨॥

ಒಣಗಿದ್ದ ಮರನೇರಿ ಹಣ್ಣು ಕಾಯನು ಮಗನು
ದಣಿಯದೆ ಮೆದ್ದಿಳಿದ
ರಣದಲ್ಲಿ ತಲೆ ಹೊಯ್ದು ರುಂಡವು ಬೀಳಲು
ಹೆಣನೆದ್ದು ಕುಣಿದಾಡಿತು ॥೩॥

ಕಣ್ಣಿಲ್ಲದಾತನು ಕಂಡು ಪಿಡಿದ ಮೃಗ
ಕೈಯಿಲ್ಲದಾತನೆಚ್ಚ
ಮಣ್ಣಲಿ ಹೊರಳುವ ಕಾಲಿಲ್ಲದಾತನು
ಗಣ್ಯವಿಲ್ಲದೆ ಪಿಡಿದ ॥೪॥

ಎಲ್ಲರು ಕೇಳಿ ಕನಕ ಹೇಳಿದ ಮಾತ
ಎಲ್ಲರೂ ಗ್ರಹಿಸಿಕೊಳ್ಳಿ
ಬೆಳ್ಳಿ ಕಣ್ಣಿನವಗೆ ತಿಳಿಯಲಾರದ ಮಾತು
ಬಲ್ಲಾದಿಕೇಶವನು ॥೫॥

**ಈತನೇನೆ ನಿನ್ನ ಮಗನು**

ಈತನೇನೆ ನಿನ್ನ ಮಗನು ॥ಪ॥
ಸೀತಾಪತಿ ರಘುನಾಥನೆಂಬವನು ॥ಅ॥

ವ್ಯಾಸನ ಜನನಿಯ ವಾಸನೆ ತಾಳ್ದನು
ದೇಶದೊಳಗೆ ಬಲು ಪೆಸರುಳ್ಳವನು
ನಾಸದೊಳೊರ್ವನ ಪೊತ್ತು ಮುರಿದು ಮು
ನೀಶರ ಶಾಪವ ಪಿಡಿದು ಕೊಂದಾತನು ॥೧॥

ಆನೆವಾಹನ ಪಿತನ ತಾಯನಳೆದೋನು
ಭಾನುಸುತಗೆ ಶಾಪವಿತ್ತವನು

ಕಾನನ ಜನನಿಯ ಕೊಂದು ಪ್ರಿಯದಲಿ ನಿ
ಧಾನದಿ ಶರಧಿ ಶಯನ ಮಾಡಿದಾತನು ॥೨॥

ಮೂಗ್ರಾಮ ಮುರಿದು ವಾಜಿಯನೇರಿದಾತನು
ಸಾಗ್ರದಿಂದಿಳೆಯ ಭಾಗ್ಯ ಹಿಂಗಿಸಿದ
ಯೋಗ್ಯದಿಂದ ಬಳಪತಿತನವನಿಗೆ
ಭಾಗ್ಯವಿತ್ತ ಕಾಗಿನೆಲೆಯಾದಿಕೇಶವ ॥೩॥

**ಪರಮಪುರುಷ ನೀ ನೆಲ್ಲಿಕಾಯಿ**

ಪರಮಪುರುಷ ನೀ ನೆಲ್ಲಿಕಾಯಿ ॥ಪ॥
ಸರಸಿಯೊಳಗೆ ಕರಿ ಕೂಗಲುಕಾಯಿ ॥ಅ॥

ಹಿರಿದು ಮಾಡಿದ ಪಾಪ ನುಗ್ಗೆ ಕಾಯಿ
ಹರಿ ನಿನ್ನ ಧ್ಯಾನ ಬಾಳೆಕಾಯಿ
ಸರುವ ಜೀವರಿಗುಣಿಸಿಯುಂ ಬದನೆಕಾಯಿ
ಅರಿಷಡ್ವರ್ಗಗಳೊದಗಿಲಿ ಕಾಯಿ ॥೧॥

ಕ್ರೂರ ವ್ಯಾಧಿಗಳೆಲ್ಲ ಹೀರೆಕಾಯಿ
ಘೋರ ದುಷ್ಕೃತಗಳು ಸೋರೆಕಾಯಿ
ಭಾರತ ಕಥೆ ಕರ್ಣ ತುಪ್ಪಿರೆ ಕಾಯಿ
ವಾರಿಜಾಕ್ಷನೆ ಗತಿಯೆಂದಿಪ್ಪೆ ಕಾಯಿ ॥೨॥

ಮುರಹರ ನಿನ್ನವರು ಅವರೆಕಾಯಿ
ಗುರು ಕರುಣಾಮೃತ ಉಣಸಿಕಾಯಿ
ವರ ಭಕ್ತ ವತ್ಸಲನೆಂಬ ಹೆಸರಕಾಯಿ
ಸಿರಿಯಾದಿ ಕೇಶವ ನಿನ್ನ ನಾಮ ಮೆಣಿಸೆಕಾಯಿ ॥೩॥

**ಹಲವು ಜೀವನವ ಒಂದೆಲೆ ನುಂಗಿತು**

ಹಲವು ಜೀವನವ ಒಂದೆಲೆ ನುಂಗಿತು–ಕಾಗಿ
ನೆಲೆಯಾದಿ ಕೇಶವನು ಬಲ್ಲನೀ ಬೆಡಗ ॥ಪ॥

ಹರಿಯ ನುಂಗಿತು ಪರ ಬ್ರಹ್ಮನ ನುಂಗಿತು
ಸುರರಿಗುಂಟಾದ ದೇವರ ನುಂಗಿತು
ಉರಿಗಣ್ಣ ಶಿವನ ಒಂದೆಲೆ ನುಂಗಿತೆಲೊ ದೇವ
ಹರಿಯ ಬಳಗವ ಒಂದೆಲೆ ನುಂಗಿತು ॥೧॥

ಎಂಟು ಗಜವನು ನುಂಗಿ ಕಂಟಕರಯಿವರ ನುಂಗಿ
ಉಂಟಾದ ಗಿರಿಯ ತಲೆಯ ನುಂಗಿತು
ಕಂಟವ ಪಿಡಿದ ಬ್ರಹ್ಮನ ನುಂಗಿತೆಲೊ ದೇವ
ಎಂಟಾರು ಲೋಕ ಒಂದೆಲೆ ನುಂಗಿತು ॥೨॥
ಗಿಡವ ನುಂಗಿತು ಗಿಡದೊಡತೊಟ್ಟನು ನುಂಗಿತು
ಗಿಡುವಿನ ತಾಯ ತಂದೆಯ ನುಂಗಿತು
ಬೆಡಗ ಬಲ್ಲರೆ ಪೇಳಿ ದೇವ ಕನಕದಾಸ ಎ
ನ್ನೊಡೆಯಾದಿಕೇಶವ ಬಲ್ಲನೀ ಬೆಡಗ ॥೩॥

**ಕೀರ್ತನೆಗಳು: ಸಂಗ್ರಹ ನೆರವು: ಡಾ. ರಂಗನಾಥ ಕಂಟನಕುಂಟೆ**
**ಮುಂಡಿಗೆಗಳು: ಸಂಗ್ರಹ ನೆರವು: ಡಾ. ಕಬ್ಬಿನಾಲೆ ವಸಂತ ಭಾರಾದ್ವಾಜ್**

# ಅವಲೋಕನ ಬರೆಹಗಳು

# ಕನಕದಾಸರು

ಹಾವೇರಿ ಜಿಲ್ಲೆಯ ಶಿಗ್ಗಾವಿ ತಾಲೂಕಿನ ಬಾಡ ಗ್ರಾಮದಲ್ಲಿ ಕ್ರಿ.ಶ.ಸುಮಾರು ೧೫೦೮ರಲ್ಲಿ ಕನಕದಾಸರು ಜನಿಸಿದರು. ಇವರ ತಂದೆ ಬೀರಪ್ಪ. ತಾಯಿ ಬಚ್ಚಮ್ಮ. ಬೀರಪ್ಪನಾಯಕ ಮತ್ತು ಅವರ ಪೂರ್ವಿಕರು ಹಾಲುಮತದ ಹಂಡೆ ಕುರುಬರು. ಕನಕದಾಸರ ಹುಟ್ಟು ಹೆಸರು ತಿಮ್ಮಪ್ಪ. ಕಾಲಕ್ರಮೇಣ ಕನಕದಾಸರೆಂದು ಪ್ರಖ್ಯಾತಿಯಾದರು. ತಂದೆ ಬೀರಪ್ಪನಾಯಕನು ಪ್ರತಿಷ್ಠಿತ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟ ದಣ್ಣಾನಾಯಕ. ೭೮ ಗ್ರಾಮಗಳ ಒಡೆತನ ಇವನ ಆಳ್ವಿಕೆಗೆ ಒಳಪಟ್ಟಿತ್ತು. ಬೀರಪ್ಪನು ಪರಿಶ್ರಮ, ಸತ್ಯಸಂಧತೆ, ಪ್ರಾಮಾಣಿಕತೆಯಿಂದ ಜನಪ್ರಿಯನಾಗಿದ್ದ.

ಬೀರಪ್ಪ ಮತ್ತು ಬಚ್ಚಮ್ಮ ದಂಪತಿಗಳಿಗೆ ಬಹುದಿನಗಳವರೆಗೆ ಮಕ್ಕಳಾಗಿರಲಿಲ್ಲ. ತಿರುಪತಿ ತಿಮ್ಮಪ್ಪನ ವರಪ್ರಸಾದದಿಂದ ಗಂಡುಮಗುವಿನ ಜನನವಾಯಿತೆಂದು; ಅದಕ್ಕಾಗಿ ತಿಮ್ಮಪ್ಪನ ಹೆಸರನ್ನೇ ಮಗುವಿಗೆ ಇಟ್ಟರೆಂಬುದು ಪ್ರತೀತಿ.

ಬೀರಪ್ಪನಾಯಕನು ತನ್ನ ಮಗನಿಗೆ ಒಳ್ಳೆ ಶಿಕ್ಷಣ ಕೊಡಿಸಲು ತಕ್ಕ ವ್ಯವಸ್ಥೆ ಮಾಡಿದ. ಆದ್ದರಿಂದ ತನ್ನ ಗೆಳೆಯನಾದ ಬಂಕಾಪುರದ ಶ್ರೀನಿವಾಸಾಚಾರ್ಯ ಅವರ ಬಳಿಯೇ ಶಿಕ್ಷಣಕ್ಕೆ ಮಗನನ್ನು ಸೇರಿಸಿದ.

ಶ್ರೀನಿವಾಸಾಚಾರ್ಯರು ತಿಮ್ಮಪ್ಪನಿಗೆ ಜ್ಞಾನಪಾಠಗಳನ್ನು ಕಲಿಸಿಕೊಟ್ಟರು. ಅರ್ಥಶಾಸ್ತ್ರ, ಧರ್ಮಶಾಸ್ತ್ರ, ತರ್ಕ–ಮೀಮಾಂಸೆ–ಛಂದಸ್ಸು–ವ್ಯಾಕರಣ ಶಾಸ್ತ್ರಗಳನ್ನು ಪರಿಚಯಿಸಿದರು. ರಾಮಾಯಣ, ಮಹಾಭಾರತ, ಭಾಗವತ ಮೊದಲಾದ ಕಾವ್ಯಪುರಾಣಗಳ ಕಥೆಯನ್ನು ವಿವರವಾಗಿ ಹೇಳಿಕೊಟ್ಟರು.

ತಿಮ್ಮಪ್ಪನಿಗೆ ಕಥೆಗಳೆಂದರೆ ಪಂಚಪ್ರಾಣ. ಕಾವ್ಯ, ಪುರಾಣ, ಜನಪದ–ಹೀಗೆ ನಾನಾ ಮೂಲಗಳ ಕಥಾಶ್ರವಣದ ಮೂಲಕ ಕಥನ ಕುತೂಹಲವನ್ನು ಇಮ್ಮಡಿಸಿಕೊಂಡಿದ್ದ. ಗುರುಗಳು ಪಂಚತಂತ್ರ, ಬೃಹತ್ಕಥೆ, ಮಹಾಭಾರತಗಳಿಂದ ಆಯ್ದು ಸ್ವಾರಸ್ಯವಾಗಿ ಹೇಳಿಕೊಡುತ್ತಿದ್ದರು. ವಿಶೇಷವೆಂಬಂತೆ ರಾಮಾಯಣ, ಮಹಾಭಾರತ, ಭಾಗವತ, ವಿಷ್ಣುಪುರಾಣದ ಒಳಗಿನ ವರ್ಣನೆಗಳು ಅವನನ್ನು ಬೇರೊಂದು ಪ್ರಪಂಚಕ್ಕೆ ಸೆಳೆದೊಯ್ಯುತ್ತಿದ್ದವು. ಜೀವಪರಿಸರದ ಪ್ರೇಮ, ದಯಾಗುಣ, ಕಾರುಣ್ಯಪೂರ್ಣ ಪ್ರಸಂಗಗಳನ್ನು ಕವಿಗಳು ನಿರ್ವಹಿಸಿರುವ ಬಗೆಯನ್ನು ವಿಸ್ಮಯದಿಂದ ಅಭ್ಯಾಸ ಮಾಡಿದ ತಿಮ್ಮಪ್ಪ ಒಮ್ಮೊಮ್ಮೆ ಅವನು ಸ್ಥಳದಲ್ಲೇ ಕಥೆ ಕಟ್ಟುತ್ತಿದ್ದ; ಪದ ಕಟ್ಟಿ

ಹಾಡುತ್ತಿದ್ದ. ಕಣ್ಣಿಗೆ ಕಂಡ ವಿಚಾರಗಳನ್ನು ಕುರಿತು ಪದಕಟ್ಟುವ ತಿಮ್ಮಪ್ಪನ ಭಾಷಾಪ್ರಭುತ್ವ ಮತ್ತು ಕಲ್ಪನಾಶಕ್ತಿಗೆ ಗುರುಗಳು ಬೆರಗಾಗುತ್ತಿದ್ದರು. ಅವನ ಲೋಕನಿರೀಕ್ಷಣೆ ಮತ್ತು ಸೂಕ್ಷ್ಮಮನಸ್ಸನ್ನು ಬಹುವಾಗಿ ಮೆಚ್ಚಿಕೊಳ್ಳುತ್ತಿದ್ದರು.

ಬಾಲ್ಯದಿಂದಲೇ ಯುದ್ಧದಾಟದ ಅಭಿಮಾನಿಯಾಗಿದ್ದ ತಿಮ್ಮಪ್ಪ ವೀರತ್ವದ ವಿದ್ಯೆಯನ್ನು ಕಲಿಸಲು ಅವನ ತಂದೆ ಸೂಕ್ತ ಏರ್ಪಾಟು ಮಾಡಿದ. ಪರಿಣತ ಗುರುಗಳಿಂದ ಅಂಗಸಾಧನೆ, ಕತ್ತಿವರಸೆ, ಕುದುರೆಸವಾರಿ, ಬಿಲ್ವಿದ್ಯೆ–ಮೊದಲಾದ ಸಮರ ಕಲೆಗಳನ್ನು ತಿಮ್ಮಪ್ಪ ಕರಗತ ಮಾಡಿಕೊಂಡ. ಸತತ ಪರಿಶ್ರಮದಿಂದಾಗಿ ಉತ್ತಮ ದೇಹದಾರ್ಢ್ಯ ಪಡೆದನಲ್ಲದೆ, ತುಂಬು ತಾರುಣ್ಯದ ಕಲಿಯಾಗಿ ಗುಂಪಿನ ನಡುವೆ ಗುರುತಾಗತೊಡಗಿದ. ಹೀಗೆ ತಿಮ್ಮಪ್ಪ ಕಲಿಗೆ ಬೇಕಾದ ವಿದ್ಯೆ ಮತ್ತು ಕವಿಗೆ ಬೇಕಾದ ಶಾಸ್ತ್ರಗ್ರಂಥಗಳ ಪರಿಚಯ ಮಾಡಿಕೊಂಡ ಎಂಬುದು ತಿಳಿದುಬರುತ್ತದೆ.

ಮುಂದೆ ತಿಮ್ಮಪ್ಪ ತರುಣಾವಸ್ಥೆಯಲ್ಲಿ ಇರುವಾಗಲೇ ಅವನ ತಂದೆ ಬೀರಪ್ಪ ಅಸುನೀಗಿದ. ತಿಮ್ಮಪ್ಪನಿಗೆ ತಂದೆಯ ಸಾವು ಆಘಾತವುಂಟುಮಾಡಿತು. ಮೊದಲ ಆಟ, ಮೊದಲ ಪಾಠ, ಮೊದಲ ಬೇಟೆ–ಹೀಗೆ ಎಲ್ಲದಕ್ಕೂ ಅಪ್ಪನೇ ಮೊದಲ ಗುರುವಾಗಿದ್ದ. ಅಪ್ಪ ಇನ್ನಿಲ್ಲವೆಂದಾಗ ಮನಸ್ಸಿಗೆ ಅತೀವ ಸಂಕಟವಾಯಿತು.

ತಂದೆಯ ಮರಣಾನಂತರ ತಿಮ್ಮಪ್ಪನಿಗೆ ನಾಯಕನ ಹೊಣೆಗಾರಿಕೆ ಹೆಗಲಿಗೇರಿತು. ಆಗ ಅವನಿಗೆ ಸುಮಾರು ಇಪ್ಪತ್ತರ ಪ್ರಾಯ. ಸದೃಢಕಾಯದ ತರುಣ; ತಾಯಿಯ ಮಾರ್ಗದರ್ಶನದಲ್ಲಿ ತಂದೆಯ ಜವಾಬ್ದಾರಿಯನ್ನು ಅತ್ಯಂತ ಕಾಳಜಿಯಿಂದ ಮುಂದುವರೆಸತೊಡಗಿದ. ಯುದ್ಧದಲ್ಲಿ ಜಯಶಾಲಿಯಾಗಿ ಬಂದ ಅವನಿಗೆ ಸುತ್ತಮುತ್ತಲ ಪಾಳೇಗಾರರು ವಿಶೇಷ ಗೌರವ ಕೊಡುತ್ತಿದ್ದರು. ತಿಮ್ಮಪ್ಪನಾಯಕನಿಗೆ ತಾಯಿ ಮದುವೆಗೆ ಒಪ್ಪಿಸಿದಳು. ಲಕ್ಷ್ಮಿಯೊಂದಿಗೆ ಅವನಿಗೆ ಮದುವೆಯಾಯಿತು. ಕನಕನಾಯಕನ ಕರ್ತವ್ಯಕುಶಲತೆ, ದೈವಭಕ್ತಿ, ತ್ಯಾಗಬುದ್ಧಿ, ಪರಾಕ್ರಮ, ಕವಿತಾಸಾಮರ್ಥ್ಯ ಮುಂತಾದ ಗುಣಗಳಿಂದಾಗಿ ಅವನ ಕೀರ್ತಿ ಹಬ್ಬತೊಡಗಿತು. ಈ ನಡುವೆ ಭೂಮಿ ಅಗೆಸುತ್ತಿದ್ದಾಗ ತಿಮ್ಮಪ್ಪನಿಗೆ ಏಳು ಕೊಪ್ಪರಿಗೆ ನಿಧಿ ಸಿಕ್ಕಿ, ಅದನ್ನು ದೇವಸ್ಥಾನಗಳ ಜೀರ್ಣೋದ್ಧಾರ, ಕೆರೆಕಟ್ಟೆಗಳ ನಿರ್ಮಾಣ, ಅಸಹಾಯಕರಿಗೆ ದಾನ, ಧರ್ಮ ಮುಂತಾದ ಜನೋಪಯೋಗಿ ಕಾರ್ಯಗಳಿಗೆ ಬಳಸಿದ್ದರಿಂದ ಜನರು ತಿಮ್ಮಪ್ಪನಾಯಕನನ್ನು ಕನಕಪ್ಪನಾಯಕನೆಂದು ಕರೆದು ಕೊಂಡಾಡಿದರು.

ಹೀಗೆ ಸಂಸಾರ ಸುಖಸಾಗರದಲ್ಲಿ ಸಾಗುತಿದ್ದಾಗಲೇ ತಾಯಿ ತೀರಿಕೊಂಡಳು. ನಂತರ ಇದ್ದ ಒಬ್ಬನೇ ಮಗ ವಂಶದ ಕುಡಿಯನ್ನು ಕಳೆದುಕೊಂಡನು. ಇದರೊಂದಿಗೆ ಪತ್ನಿಯು ಸಹ ಮಗನ ಸಾವಿನಿಂದ ಜರ್ಜರಿತಳಾಗಿ ಮನೋರೋಗದಿಂದ ತೀರಿಕೊಂಡಳು. ಕೊನೆಗೆ ಯುದ್ಧದಲ್ಲಿಯೂ ಸಹ ಕನಕನಾಯಕ ಸೋಲನ್ನು ಅನುಭವಿಸಬೇಕಾಯಿತು. ಇದು ಕನಕದಾಸರಿಗೆ ಬದುಕಿನ ತಿರುವು ಎನ್ನಬಹುದು.



ಅದುವರೆಗೆ ಅಂತರಂಗದಲ್ಲಿ ನಿರಂತರವಾಗಿ ಮೊರೆಯುತ್ತಿದ್ದ ಅಧ್ಯಾತ್ಮಿಕ ಆಕಾಂಕ್ಷೆಗೆ ಓಗೊಡಬೇಕು ಅನಿಸಿತು. ಧರ್ಮ,ತತ್ವ, ಪುರಾಣಶಾಸ್ತ್ರಗಳ ಸಂಸ್ಕಾರ ಪಡೆದಿದ್ದ ಮನಸ್ಸು ವಿರಕ್ತಿಯ ಕಡೆಗೆ ವಾಲತೊಡಗಿತು. ಪ್ರಪಂಚದ ಬಗೆಗಿನ ಆ ಕ್ಷಣದ ನಿರಾಸಕ್ತಿ ವೈರಾಗ್ಯಭಾವವಾಗಿ ಮಾರ್ಪಟ್ಟಿತು. ಆಗಾಗ ಕನಸಿನಲ್ಲಿ ಕಾಣಿಸಿಕೊಳ್ಳುತ್ತಿದ್ದ ದೈವದ ಅಶರೀರವಾಣಿಗೊಂದು ಸಾಕಾರ ರೂಪ ದೊರೆತಂತಾಯಿತು. ಬದುಕಿನ ಅರ್ಥವನ್ನು ಅರೆಸುತ್ತಾ, ಮೋಕ್ಷದ ಹಾದಿ ಹುಡುಕುತ್ತಾ ತಾಳ ತಂಬೂರಿ ಹಿಡಿದು ಹೊರಟರು. ಇದಿಷ್ಟು' ಕನಕದಾಸರ ಬಾಲ್ಯ ಮತ್ತು ತಾರುಣ್ಯ ಕಾಲದ ಸಂಗ್ರಹಾಧಾರಿತ ಅಂಶಗಳ ಜೀವನ ಚಿತ್ರ.

ತಿಮ್ಮಪ್ಪನಾಯಕ ಕನಕದಾಸನಾಗಿ ಭಾಗವತರಾಗಲು ಹೊರಟಿದ್ದೇನೋ ನಿಜ. ಆದರೆ ಭಾಗವತ ಒಕ್ಕೂಟಕ್ಕೆ ಇವರನ್ನು ಸೇರಿಸಿಕೊಳ್ಳಲಿಲ್ಲ. ತಾತಾಚಾರ್ಯರ ಬಳಿ ಹೋದರು. ವ್ಯಾಸರಾಯರ ಬಳಿ ಹೋದರು. ಮೋಕ್ಷ ಸಾಧನೆಗೆ ಮಾರ್ಗವನ್ನು ಸೂಚಿಸುವಂತೆ ಕೇಳಿದರು. ಗುರುಗಳೇನೋ ಕನಕದಾಸರ ಜ್ಞಾನಕ್ಕೆ ತಲೆದೂಗಿದರು. ಆದರೆ, ಶಿಷ್ಯ ಪರಂಪರೆ ಕನಕದಾಸರನ್ನು ಜಾತಿ ಕಾರಣಕ್ಕೆ ಒಪ್ಪಿಕೊಳ್ಳಲಿಲ್ಲ. ಹೆಜ್ಜೆ ಹೆಜ್ಜೆಗೂ ಅವರನ್ನು ಅವಮಾನಿಸಿದರು, ಹೀಯಾಳಿಸಿದರು, ಅಜ್ಞಾನಿ ಎಂದು ಬಗೆದರು. ಆಗ ಕನಕದಾಸರು ತಮ್ಮನ್ನು ತಾವು ಸಾಂಸ್ಕೃತಿಕವಾಗಿ ಸ್ಥಾಪಿಸಿಕೊಳ್ಳಬೇಕಾದುದು ಅನಿವಾರ್ಯವಾಯಿತು. ಈ ಸಂದರ್ಭದಲ್ಲಿ ಕನಕದಾಸರಿಗೆ ವ್ಯಾಸರಾಯರು ಹಲವು ಪರೀಕ್ಷೆಗಳನ್ನೊಡ್ಡಿ ಅವರ ಸ್ಥಾನಮಾನ ಮತ್ತು ಜ್ಞಾನ ಏನು ಎಂಬುದನ್ನು ಪ್ರಚುರಪಡಿಸಿದರು. ಈ ಬಗ್ಗೆ ಹಲವಾರು ಐತಿಹ್ಯಗಳು ಇಂದೂ ಕೂಡ ಜನಮನದಲ್ಲಿ ಹಸಿರಾಗಿ ಉಳಿದಿವೆ.

ವ್ಯಾಸರಾಯರು ಒಂದು ದಿನ ಶಿಷ್ಯರೆಲ್ಲರನ್ನೂ ಕರೆದು ಬಾಳೆಹಣ್ಣನ್ನು ಕೊಟ್ಟು ಯಾರು ಇಲ್ಲದ ಕಡೆ ತಿಂದು ಬನ್ನಿ ಎಂದು ಆಜ್ಞಾಪಿಸಿದಾಗ, ಎಲ್ಲ ಶಿಷ್ಯರು ಕದ್ದುಮುಚ್ಚಿ ತಿಂದುಬಂದರೆ ಕನಕದಾಸರು ತಿನ್ನದೆ ಹಣ್ಣನ್ನು ವಾಪಸು ತಂದಾಗ ವ್ಯಾಸರಾಯರು ಏಕೆಂದು ಕೇಳುತ್ತಾರೆ. ಭಗವಂತನಿಲ್ಲದಿರುವ ಜಾಗ ನನಗೆ ಎಲ್ಲೂ ಸಿಗಲಿಲ್ಲ ಎಂದು ಹೇಳಿಕೊಳ್ಳುತ್ತಾರೆ. ಮತ್ತೊಂದು ಕಥೆಯೆಂದರೆ ಯಥಾಪ್ರಕಾರ ವ್ಯಾಸಮಠದಲ್ಲಿ ಶಿಷ್ಯರೆಲ್ಲರೂ ಸೇರಿದ್ದಾಗ ಮೋಕ್ಷದ ಬಗ್ಗೆ ಚರ್ಚೆ ನಡೆಯುತ್ತದೆ. ಆಗ ವ್ಯಾಸರಾಯರು ಯಾರು ವೈಕುಂಠಕ್ಕೆ ಹೋಗುತ್ತೀರಿ ಎಂದು ಕೇಳಿದಾಗ, ಶಿಷ್ಯರೆಲ್ಲರೂ ತಮ್ಮ ಪಾಂಡಿತ್ಯ ಪ್ರದರ್ಶನ ಮಾಡುತ್ತಾ ತಾವು ಹೋಗುವುದಾಗಿ ಹೇಳಿಕೊಳ್ಳುತ್ತಾರೆ. ಕನಕದಾಸರನ್ನು ಕೇಳಿದಾಗ ಇವರ‍್ಯಾರೂ ಹೋಗುವುದಿಲ್ಲ ಎಂದು ಹೇಳುತ್ತಾರೆ. ವ್ಯಾಸರಾಯರು ಮರು ಪ್ರಶ್ನಿಸಿ ನಾನು ಹೋಗಬಹುದೇ ಎಂದಾಗ ನೀವೂ ಹೋಗುವುದಿಲ್ಲ ಎನ್ನುತ್ತಾರೆ. ಶಿಷ್ಯರೆಲ್ಲರಿಗೂ ವಿಪರೀತ ಸಿಟ್ಟುಬರುತ್ತದೆ. ಕನಕದಾಸರನ್ನು ನಿಂದಿಸುತ್ತಾರೆ. ವ್ಯಾಸರಾಯರು ಶಿಷ್ಯರನ್ನು ಸುಮ್ಮನಿರಿಸಿ ಹಾಗಾದರೆ ನೀನು ಹೋಗುತ್ತೀಯಾ? ಎಂದು ಕೇಳಿದಾಗ,

'ನಾನು ಹೋದರೆ ಹೋದೇನು' ಎಂಬ ಉತ್ತರವನ್ನು ಕನಕದಾಸರು ನೀಡುತ್ತಾರೆ. ಇಲ್ಲಿ 'ನಾನು' ಎಂಬುದು ಅಹಂಕಾರ. ಆ ಭಾವ ಹೋದರೆ ಸಾಧನೆಯಿಂದ ವೈಕುಂಠಕ್ಕೆ ಹೋಗಬಹುದು ಎಂಬುದು ಇದರ ಅರ್ಥ.

ಒಂದು ದಿನ ವ್ಯಾಸರಾಯರು ಕನಕದಾಸರನ್ನು ಕುರಿತು ಪೂಜಾ ಸಮಯದಿ ಭಗವಂತನನ್ನು ತೋರಿಸುವೆಯಾ ಎಂದು ಕೇಳುತ್ತಾರೆ. ಅದಕ್ಕೆ ಅವರು ಒಪ್ಪುತ್ತಾರೆ. ಮಾರನೆ ದಿನ ತೋರಿಸು ಎನ್ನುತ್ತಾರೆ. ಮಾರನೆ ದಿನ ಪೂಜಾ ಸಮಯದಲ್ಲಿ ನಾಯಿಯೊಂದು ಬಂದಾಗ ಶಿಷ್ಯರೆಲ್ಲರೂ ಬಡಿಗೆ ಹಿಡಿದು ಓಡಿಸುತ್ತಾರೆ. ವ್ಯಾಸರಾಯರು ಪೂಜಾ ಸಮಯ ಮುಗಿದ ಮೇಲೆ ಎಲ್ಲಿ ನಿನ್ನ ಭಗವಂತ ಎಂದು ಕೇಳಿದಾಗ ನಾಯಿ ರೂಪದಲ್ಲಿ ಬಂದುಹೋದನಲ್ಲಾ ಎಂದು ಅರಹುತ್ತಾರೆ. ಅದಕ್ಕೆ ವ್ಯಾಸರಾಯರು ಒಪ್ಪುವ ರೀತಿಯಲ್ಲಿ ಬರುವಂತೆ ತಿಳಿಸು ಎಂದಾಗ ಮಾರನೆ ದಿನ ಗರ್ಭಗುಡಿಯಿಂದ ಹಾವು ಪ್ರತ್ಯಕ್ಷವಾಗುತ್ತದೆ. ಶಿಷ್ಯರೆಲ್ಲರು ಹೆದರಿ ಓಡಿಹೋಗುತ್ತಾರೆ. ಆಗ ವ್ಯಾಸರಾಯರು ಇವನೇ ಪರಮಾತ್ಮನೆಂದು ಕನಕದಾಸರ ಭಕ್ತಿಗೆ ಮೆಚ್ಚಿ ಹರಸುತ್ತಾರೆ.

ಹೀಗೆ ಹಲವು ಐತಿಹ್ಯಗಳು ಒಬ್ಬ ದಾರ್ಶನಿಕ ಕವಿಯ ಮುಂದೆ ಹುಟ್ಟಿಕೊಂಡಿರುವುದು ಐತಿಹಾಸಿಕವಾಗಿ ಚರ್ಚಾರ್ಹವಾಗಿದ್ದರೂ ಕನಕದಾಸರ ಮಹತ್ವ ಮತ್ತು ಜನಪದರ ಮನಸ್ಸಿನಲ್ಲಿ ಕನಕದಾಸರ ಬಗೆಗೆ ಇದ್ದ ಗೌರವವನ್ನು ಇದು ವ್ಯಕ್ತಪಡಿಸುತ್ತದೆ.

ಮುಂದೆ ಕನಕದಾಸರು ತಾಳ, ತಂಬೂರಿ ಮೀಟುತ್ತಾ, ಕೀರ್ತನೆಗಳ ಕಟ್ಟುತ್ತಾ, ಕ್ಷೇತ್ರಾ ಸ್ಥಳಗಳ ಸಂದರ್ಶನ ಮಾಡುತ್ತಾ ನಾಡಿನ ಉದ್ದಗಲಕ್ಕೂ ಸಂಚರಿಸುತ್ತಾರೆ. ಹಂಪೆ, ತಿರುಪತಿ, ಕನಕಗಿರಿ, ಶ್ರೀರಂಗಂ, ಬೇಲೂರು, ಮೇಲುಕೋಟೆ, ಶ್ರೀರಂಗಪಟ್ಟಣ, ಶಿವನಸಮುದ್ರ, ಮಹಾದೇವಪುರ, ಸೋಸಲೆ, ಪುರಿ, ಗಯಾ, ಮಥುರಾ, ದ್ವಾರಕೆ, ರಾಜಸ್ಥಾನ, ಉಡುಪಿ – ಹೀಗೆ ದಾಸರ ದಾಸನಾಗಿ ಸಂಚಾರ ಮಾಡುತ್ತಾರೆ. ಉಡುಪಿಗೆ ಬಂದಾಗ ಶ್ರೀಕೃಷ್ಣನ ಗುಡಿಯೊಳಗೆ ಪ್ರವೇಶ ದೊರಕುವುದಿಲ್ಲ. ಪುರೋಹಿತರು ನಿಮ್ಮ ಕುಲದವನಿಗೆ ಗರ್ಭಗುಡಿಗೆ ಪ್ರವೇಶವಿಲ್ಲವೆಂದು ತಡೆಯುತ್ತಾರೆ. ಆಗ ಕೃಷ್ಣನ ಭಕ್ತ ಕನಕರು ಗುಡಿಯ ಹಿಂಭಾಗದಲ್ಲಿ ನಿಂತು ಶ್ರೀಕೃಷ್ಣನಿಗೆ ಮೊರೆಯಿಡುತ್ತಾರೆ. ಶ್ರೀಕೃಷ್ಣನು ದೇವಸ್ಥಾನದ ಹಿಂಬದಿಯ ಗೋಡೆ ಒಡೆದು ಕನಕದಾಸರಿಗೆ ದರ್ಶನ ನೀಡುತ್ತಾನೆ. ಇದು ಪ್ರಖ್ಯಾತವಾದ ಪ್ರಚಲಿತ ಐತಿಹ್ಯ.

ಹೀಗೆ ಕನಕದಾಸರು ಭಕ್ತಿಯ ಸಾರವನ್ನು ಹೇಳುವುದರ ಜೊತೆಗೆ ಸಾಮಾಜಿಕ ಮೌಲ್ಯವನ್ನು – ಮನುಷ್ಯ ಮನುಷ್ಯರ ನಡುವಿನ ಸಾಮರಸ್ಯದ ಬಾಳ್ವೆಯನ್ನು ತನ್ನ ಕೀರ್ತನೆಗಳ, ಕಾವ್ಯಗಳ ಮೂಲಕ ವ್ಯಕ್ತಪಡಿಸುತ್ತಾರೆ. ಅವರು ಇಳಿವಯಸ್ಸಿನಲ್ಲಿ ಕಾಗಿನೆಲೆಗೆ ಬಂದು ನೆಲೆಸುತ್ತಾರೆ. ಸುಮಾರು ೯೫ ವರ್ಷಕ್ಕೂ ಮೇಲ್ಪಟ್ಟು ತುಂಬು ಬಾಳನ್ನು ಬಾಳಿದ ಕನಕದಾಸರು ಕಾಗಿನೆಲೆಯಲ್ಲಿ ಕ್ರಿ.ಶ.ಸುಮಾರು ೧೫೭೮ರಲ್ಲಿ ದೇಹತ್ಯಾಗ ಮಾಡುತ್ತಾರೆ. ಕಾಗಿನೆಲೆಯಲ್ಲಿ ಕನಕದಾಸರ ಸಮಾಧಿ ಇದೆ.



**ಕನಕದಾಸರ ಕಾವ್ಯಗಳು ಮತ್ತು ಕೀರ್ತನೆಗಳ ಸಂಕ್ಷಿಪ್ತ ವಿವರ:**

**ಮೋಹನ ತರಂಗಿಣಿ:** ಇದು ಕನಕದಾಸರ ಬೃಹತ್ ಪೌರಾಣಿಕ ಕಥನಕಾವ್ಯ. ಸಮೃದ್ಧ ವರ್ಣನೆಗಳಿಂದ ಕೂಡಿದ ಮಹಾಕಾವ್ಯ. ೪೨ ಸಂಧಿಗಳ ವಿಶಾಲ ಭಿತ್ತಿಯಲ್ಲಿ ಸುಮಾರು ೨೮೦೦ಕ್ಕೂ ಹೆಚ್ಚು ಪದ್ಯಗಳಿಂದ ಈ ಕಾವ್ಯದ ಮಹಾಸೌಧವನ್ನು ಕಟ್ಟಲಾಗಿದೆ. ಸಂಗೀತದ ಲಯ–ಮಾಧುರ್ಯವನ್ನು ಹೊಮ್ಮಿಸುವ ದೇಸೀಯವಾದ ಸಾಂಗತ್ಯ ಛಂದಸ್ಸಿನಲ್ಲಿ ಇದನ್ನು ರಚಿಸಲಾಗಿದೆ. ಭಾಗವತ, ಮಹಾಭಾರತ, ಪುರಾಣ, ಸ್ಕಂದ ಪುರಾಣ, ಹರಿವಂಶ ಹಾಗೂ ವಿಷ್ಣು ಪುರಾಣಗಳೇ ಈ ಕಥೆಗೆ ಆಕರ. ಹೀಗೆ ಪೌರಾಣಿಕ ವಸ್ತು ಆರಿಸಿಕೊಂಡು ತಾನು ಬದುಕಿದ ಕಾಲದ ಜನಜೀವನಕ್ಕೆ ಸಮೀಕರಿಸಿ ರೂಪಿಸಿದ ಕಥೆ ಈ ಕಾವ್ಯದ ಒಂದು ವಿಶೇಷವಾದರೆ ಹರಿ–ಹರರನ್ನು ಸಮನ್ವಯಗೊಳಿಸಿದ ಮತಸಹಿಷ್ಣುತೆ ಈ ಕಾವ್ಯದ ಮತ್ತೊಂದು ವಿಶೇಷತೆ. ಕಥಾ ನಿರೂಪಣೆ, ವರ್ಣನೆ, ಪಾತ್ರ ಚಿತ್ರಣ ಹಾಗೂ ಶೈಲಿಗಳಲ್ಲಿ ಮೋಹನ ತರಂಗಿಣಿ ವಿಶಿಷ್ಟತೆಯನ್ನು ಮೆರೆದಿದೆ.

**ನಳಚರಿತ್ರೆ:** ಭಾಮಿನಿ ಷಟ್ಪದಿಯಲ್ಲಿ ರಚನೆಯಾಗಿರುವ ೪೮೧ ಪದ್ಯಗಳಿರುವ, ೯ ಸಂಧಿಗಳ ಕಾವ್ಯ. ಸಂಸ್ಕೃತ ಮಹಾಭಾರತದ ವನಪರ್ವದಲ್ಲಿ ಬರುವ ನಳೋಪಾಖ್ಯಾನವೆ ನಳಚರಿತೆಗೆ ಆಕರ. ಪೌರಾಣಿಕ ಪಾತ್ರಗಳಿಗೆ ಮಾನವೀಯ ಸ್ಪರ್ಶ ನೀಡಿರುವುದು ಇಲ್ಲಿನ ವೈಶಿಷ್ಟ್ಯ. ಹೆಸರಿಗೆ ಇದು ನಳಚರಿತೆಯಾದರೂ ವಾಸ್ತವದಲ್ಲಿ ಇದು ದಮಯಂತಿಯ ಸಂಘರ್ಷಮಯ ಪ್ರೇಮತ್ಯಾಗಗಳ ಕಥಾನಕ. ಈ ಬಗೆಯ ಕಾವ್ಯ ತೀವ್ರತೆಯ ಭಾವಸಾಂದ್ರತೆಯಿಂದಾಗಿ ಕನ್ನಡಿಗರ ಮನೆಮಾತಾಗಿದೆ.

**ರಾಮಧಾನ್ಯ ಚರಿತ್ರೆ:** ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವ ೧೫೮ ಪದ್ಯಗಳನ್ನು ಒಳಗೊಂಡ ಕನಕರ ಜೀವನಾನುಭವದ ನೆಲೆಯಲ್ಲಿ ರಚಿಸಿದ ವಿಡಂಬನಾತ್ಮಕ ಶ್ರೇಷ್ಠ ಕಾವ್ಯ. ವಾಸ್ತವವಾಗಿ ಇದೊಂದು ರಾಗಿ ರಾಮಾಯಣ. ಪೌರಾಣಿಕ ವಸ್ತುವಿಗೆ ಜಾನಪದದ ತನಿಯನ್ನೆರೆದು ಸಮಾಜದ ವರ್ಗ ವೈಷಮ್ಯದ ಪರಿಣಾಮಗಳನ್ನು ರಾಗಿ ಬತ್ತಗಳ ಮೂಲಕ ಹೇಳುವ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೇ ವಿನೂತವಾದ ಕಾವ್ಯಕೃತಿ. ಶ್ರೀರಾಮಚಂದ್ರನ ಸಮ್ಮುಖದಲ್ಲಿ ಮೇಲು ಮತ್ತು ಕೀಳು ಎಂಬ ಎರಡು ವರ್ಗಗಳ ಪ್ರತಿನಿಧಿಗಳಾಗಿ ಬತ್ತ ಮತ್ತು ರಾಗಿಗಳು ನಿಲ್ಲುತ್ತವೆ. ಎರಡೂ ಧಾನ್ಯಗಳಿಗೂ ತಮ್ಮ ಸ್ವಸಾಮರ್ಥ್ಯವನ್ನು ಸಾಬೀತುಪಡಿಸಿಕೊಳ್ಳಲು ಅವಕಾಶ ಕಲ್ಪಿಸಿದಾಗ ತನ್ನ ಶ್ರಮ ಸಂಸ್ಕೃತಿ ಮತ್ತು ಬಹುಜನರ ತ್ರಾಣವಾದ ರಾಗಿಯೇ ಹಿರಿದೆಂದು ಸಾಬೀತಾಗುತ್ತದೆ.

ಶ್ರೀರಾಮ ಮೆಚ್ಚಿ ರಾಗಿಗೆ ತನ್ನ ಹೆಸರನ್ನು ಅಭಿದಾನ ಮಾಡುತ್ತಾನೆ. ತಳ ಸಮುದಾಯಗಳ ಆತ್ಮಾಭಿಮಾನವನ್ನು ಸಾಕ್ಷೀಕರಿಸಿ, ದನಿ ಕಳೆದುಕೊಂಡವರಿಗೆ ಘನತೆ ಇದೆಯೆಂದು ತೋರಿ ಮಾನ್ಯ ಮಾಡಿಸಿಕೊಡುವುದು ಕವಿಯ ವಿಶೇಷತೆ. ಸಮಸಮಾಜದ ಆಶಯವನ್ನು ಬಹು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸಿದ ಕನಕದಾಸರು ಕನ್ನಡ ಸಾಹಿತ್ಯ ಚರಿತ್ರೆಗೆ ಭಿನ್ನವಾದ ಮತ್ತು ವಿನೂತನ ಕಲ್ಪನೆಯ ಮೂಲಕ ಕಾವ್ಯದಚ್ಚರಿ ಮೂಡಿಸಿದ್ದು ಅವರ ಕಾವ್ಯ ಪ್ರತಿಭೆಗೆ ಸಾಕ್ಷಿ.

**ಹರಿಭಕ್ತಿಸಾರ:** ತುಂಬಾ ಜನಪ್ರಿಯ, ಸರ್ವಜನಾದರಣೀಯ ಹಾಗೂ ಸರಳ ಶೈಲಿಯ ಭಕ್ತಿ ಶತಕ ಕಾವ್ಯ. ಈ ಕಾವ್ಯದಲ್ಲಿ ೧೦೮ ಪದ್ಯಗಳಿವೆ. ಭಕ್ತಿ, ನೀತಿ, ವೈರಾಗ್ಯ, ಹರಿಯ ಹಿರಿಮೆ–ಗರಿಮೆಗಳನ್ನು ಹಾಗೂ ಆತ್ಮನ ಅನಿತ್ಯತಾಭಾವ ಮತ್ತು ಅನನ್ಯವಾದ ಶರಣಾಗತಿಯನ್ನು ವರ್ಣಿಸುವ ಕಾವ್ಯ. ಕನಕದಾಸರ ತತ್ವಜ್ಞಾನ ಜೀವನಾದರ್ಶ ಲೋಕನೀತಿಗಳು ಇಲ್ಲಿ ಪ್ರತಿಪಾದಿತವಾಗಿವೆ. ಭಕ್ತಿ ಎಂಬುದು ಪಾರಾಯಣ ಮಾಡುವುದಕ್ಕಲ್ಲ; ಅದು ಜ್ಞಾನೋಪಾಸನೆಗೆ ಎಂಬ ಮಾರ್ಗದಲ್ಲಿ ತೊಡಗಿಸಿಕೊಂಡ ಬಗೆ ಕನಕದಾಸರ ವೈಶಿಷ್ಟ್ಯ. ಭಕ್ತಿಯನ್ನು ಸಾಮಾಜಿಕರಣಗೊಳಿಸಿದ್ದು ಅವರ ವಿಶೇಷ ಸಾಧನೆ.

**ಕೀರ್ತನೆಗಳು:** ಕನಕದಾಸರು ರಚಿಸಿರುವ ಬಹು ಜನಪ್ರಿಯವಾದ ರಚನೆಗಳೆಂದರೆ ಕೀರ್ತನೆಗಳು. ಸುಮಾರು ೩೧೬ಕ್ಕೂ ಹೆಚ್ಚು ಕೀರ್ತನೆಗಳನ್ನು ರಚಿಸಿದ್ದಾರೆ. ಮುಂಡಿಗೆ, ಉಗಾಭೋಗಗಳು, ಉದಯರಾಗಗಳನ್ನೊಳಗೊಂಡರೂ ಇವುಗಳಲ್ಲಿ ಕನಕರ ನಿಸ್ಸಂಕೋಚ ಅಭಿವ್ಯಕ್ತಿ, ಸಹಜತೆ, ನಿಷ್ಠುರತೆ, ಜಾನಪದೀಯ ಲಯ ಕೀರ್ತನೆಗಳಲ್ಲಿ ಕಂಡುಬರುತ್ತದೆ. ಕೀರ್ತನೆಗಳ ಮೂಲಕ ಕನಕದಾಸರು ಡಾಂಭಿಕತೆಯನ್ನು ಖಂಡಿಸುವ, ಸಮಾಜವನ್ನು ವಿಮರ್ಶಿಸುವ, ಲೋಕನೀತಿಯನ್ನು ಬೋಧಿಸುವ, ಭಕ್ತಿ ಪಾರಮ್ಯವನ್ನು ಮೆರೆಯುವ ಕೆಲಸವನ್ನು ಮಾಡಿದ್ದಾರೆ. ಸಾಮಾಜಿಕ, ಪಾರಮಾರ್ಥಿಕ ಚಿಂತನೆಗಳನ್ನು ಭಾಷಿಕಲಯದಲ್ಲಿ ಬಹು ಗಂಭೀರವಾಗಿ ವಿವೇಚಿಸುವ ಕೀರ್ತನೆಗಳು ಕನಕದಾಸರು ಕನ್ನಡ ಸಾಹಿತ್ಯಕ್ಕೆ ನೀಡಿದ ಬಹು ಅಮೂಲ್ಯ ಕೊಡುಗೆಗಳಾಗಿವೆ. ಕೀರ್ತನಾ ಸಾಹಿತ್ಯದಲ್ಲಿ ಉಳಿದ ಕೀರ್ತನಕಾರರು ಕೇವಲ ಕೀರ್ತನೆಗಳನ್ನು ಮಾತ್ರ ರಚಿಸಿದ್ದರೆ ಕನಕದಾಸರು ಕೀರ್ತನೆಗಳ ಜೊತೆಗೆ ಮೇಲೆ ಉಲ್ಲೇಖಿಸಿದ ನಾಲ್ಕು ಕಾವ್ಯಕೃತಿಗಳನ್ನು ನೀಡಿದ ಸಂತ ಶ್ರೇಷ್ಠ ಕವಿಯಾಗಿದ್ದಾರೆ.

ಹೀಗೆ ಕನಕದಾಸರು ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಪ್ರಪಂಚದ ಒಳಹೊರಗನ್ನು ಹುಡುಕುತ್ತಾ ಸ್ಪಂದಿಸುತ್ತಾ ಭಕ್ತಿಯ ಮೂಲಕವೇ ಮನುಷ್ಯ ಸಮಾಜದ ಹಸನನ್ನು ಹರೆಸುತ್ತಾ ಸಾಗಿದ ದಾರ್ಶನಿಕ ಕವಿ.



ಮಣ್ಣಿನಲಿ ಬಂಧಿಸಿದ ದೇಹವ
ಮಣ್ಣುಗೂಡಿಸಬೇಡ; ಜ್ಞಾನದ
ಕಣ್ಣ ದೃಷ್ಟಿಯನ್ನಿಟ್ಟು ರಕ್ಷಿಸು ನಮ್ಮನನವರತ

ಕಲಿಯಾಗಿ, ವಿರಕ್ತನಾಗಿ, ಭಕ್ತನಾಗಿ, ದಾಸನಾಗಿ, ದಾರ್ಶನಿಕನಾಗಿ, ಕೀರ್ತನಕಾರನಾಗಿ, ವಾಗ್ಗೇಯಕಾರನಾಗಿ, ಮಹಾಕವಿಯಾಗಿ, ಸಮಾಜ ವಿಜ್ಞಾನಿಯಾಗಿ, ಬಂಡಾಯ ಮನೋಧರ್ಮಿಯಾಗಿ, ಸ್ವ–ವಿಮರ್ಶಕನಾಗಿ, ಸಂಸ್ಕೃತಿ ಚಿಂತಕನಾಗಿ, ಜನಪದರಲ್ಲೊಬ್ಬನಾಗಿ ಕನಕದಾಸರು ಕನ್ನಡ ಸಂಸ್ಕೃತಿ ಮತ್ತು ಮಾನವ ಸಮಾಜಕ್ಕೆ ಅಮೂಲ್ಯ ಕೊಡುಗೆ ನೀಡಿದ್ದಾರೆ. ಅವರ ಹಲವು ವ್ಯಕ್ತಿತ್ವಗಳು ಏಕೀಭವಿಸಿಕೊಂಡ ಒಟ್ಟಾರೆ ದರ್ಶನ ಕಾಲ–ಧರ್ಮದೊಂದಿಗೆ ಪ್ರವಹಿಸುತ್ತಲೇ ಬರುತ್ತಿದೆ. ಇದೇ ಮಹಾಸಂತಕವಿ ಕನಕದಾಸರ ಅನನ್ಯತೆ; ಶ್ರೇಷ್ಠತೆ. ಹಾಗಾಗಿ ಅವರು ಕನ್ನಡ ಸಾಂಸ್ಕೃತಿಕ ಲೋಕದಲ್ಲಿ ಚಿರಸ್ಥಾಯಿ ಧ್ರುವತಾರೆ.

## ಕನಕದಾಸರ ಬದುಕಿನ ಹೆಜ್ಜೆಗಳು

| | |
|---|---|
| **ಹೆಸರು:** | ಹುಟ್ಟು ಹೆಸರು ತಿಮ್ಮಪ್ಪ. ಕಾಲಕ್ರಮೇಣ ತಿಮ್ಮಪ್ಪನಾಯಕ, ಕನಕಪ್ಪ, ಕನಕಪ್ಪನಾಯಕ, ಕನಕದಾಸ ಎಂಬುದಾಗಿ ಪ್ರಖ್ಯಾತಿ. |
| **ಜನ್ಮಸ್ಥಳ:** | ಹಾವೇರಿ ಜಿಲ್ಲೆಯ ಶಿಗ್ಗಾವಿ ತಾಲೂಕಿನ 'ಬಾಡ'. |
| **ತಂದೆ:** | ಬೀರಪ್ಪ. ಜನ 'ಬೀರಪ್ಪನಾಯಕ' ಎಂದೂ ಕರೆಯುತ್ತಿದ್ದರು. ಅವನು ಊರಿನ 'ದಣ್ಣಾಯಕ'. ಅಂದರೆ 'ನಾಡಗೌಡ'. ಬಾಡ ಹಾಗೂ ಬಂಕಾಪುರ ಭಾಗದ ಒಟ್ಟು ೭೮ ಗ್ರಾಮಗಳ ನಾಡಗೌಡಿಕೆ ಆತನದ್ದಾಗಿತ್ತು. |
| **ತಾಯಿ:** | 'ಬಚ್ಚಮ್ಮ'. |
| **ಮತ:** | ಬೀರಪ್ಪನಾಯಕ ಮತ್ತು ಅವನ ಪೂರ್ವಿಕರು ಹಾಲುಮತದ ಅಂಡೆ ಕುರುಬರು. ಮೂಲತಃ ಶೈವರಾಗಿದ್ದ ಅವರು ಶಿವದೇವರನ್ನು 'ಬೀರಲಿಂಗ', 'ಬೀರದೇವ', 'ಬೀರಪ್ಪ'ನೆಂದು ಕರೆಯುತ್ತಿದ್ದರು. |
| **ಹುಟ್ಟಿದ ವರ್ಷ:** | ಕ್ರಿ.ಶ.ಸುಮಾರು ೧೪೮೮. |
| **ವಿದ್ಯಾಗುರು:** | ಬಂಕಾಪುರದ ಶ್ರೀನಿವಾಸಾಚಾರ್ಯರು. ಅವರ ಬಳಿ ತಿಮ್ಮಪ್ಪ ಕೌಟಿಲ್ಯನ ಅರ್ಥಶಾಸ್ತ್ರ, ಧರ್ಮಸೂಕ್ತ, ತರ್ಕ–ಮೀಮಾಂಸೆ–ಛಂದಸ್ಸು–ವ್ಯಾಕರಣ ಶಾಸ್ತ್ರ ಮುಂತಾದ ಜ್ಞಾನಪಾಠಗಳನ್ನೂ |

ರಾಮಾಯಣ, ಮಹಾಭಾರತ, ಭಾಗವತ ಮೊದಲಾದ ಕಾವ್ಯಪುರಾಣಗಳನ್ನೂ ಕಲಿತನು. ಜೊತೆಗೆ ಕ್ಷತ್ರಿಯೋಚಿತ ವಿದ್ಯೆಗಳಾದ ಕತ್ತಿವರಸೆ, ಕುದುರೆಸವಾರಿ, ಬಿಲ್ವಿದ್ಯೆ – ಮೊದಲಾದ ಸಮರ ಕಲೆಗಳನ್ನು ಕರಗತ ಮಾಡಿಕೊಂಡ.

**ತಂದೆಯ ಸಾವು:** ತಿಮ್ಮಪ್ಪನ ಕಲಿಕೆಯೆಲ್ಲ ಮುಗಿಯುವ ಹೊತ್ತಿಗೆ ಬೀರಪ್ಪನಾಯಕ ಮರಣ ಹೊಂದಿದ. ಅಪ್ಪನ ಹೊಣಗಾರಿಕೆ ತಿಮ್ಮಪ್ಪನ ಕೊರಳಿಗೆ ಬಿತ್ತು. ತಿಮ್ಮಪ್ಪ, ತಿಮ್ಮಪ್ಪನಾಯಕ: ಒಮ್ಮೆ ನೆಲವನ್ನು ಅಗೆಸುತ್ತಿದ್ದಾಗ ಬಂಗಾರ ತುಂಬಿದ ಏಳು ಕೊಪ್ಪರಿಗೆಗಳು ದೊರೆತವು. ಅಲ್ಲಿ ಸಿಕ್ಕ ಅಷ್ಟೂ ಹೊನ್ನನ್ನು ವೃಥಾ ದುಂದುವೆಚ್ಚ ಮಾಡದೆ ಸಾರ್ವಜನಿಕ ಸೇವೆಗಾಗಿ ವಿನಿಯೋಗ ಮಾಡಿದ. ಜನರು 'ಕನಕಪ್ಪ', 'ಕನಕನಾಯಕ' ಎಂದು ಕರೆಯತೊಡಗಿದರು.

**ಮದುವೆ–ಸಂಸಾರ:** ಈ ಮಧ್ಯೆ, ತುಂಬು ತಾರುಣ್ಯದ ಕಲಿಯಾಗಿದ್ದ ಕನಕನಾಯಕನಿಗೆ 'ಲಕ್ಷ್ಮೀದೇವಿ' ಎಂಬ ಕನ್ಯೆಯೊಂದಿಗೆ ಮದುವೆಯಾಯಿತು. ಈ ದಂಪತಿಗಳಿಗೆ ಗಂಡುಮಗು ಜನನವಾಯಿತು.

**ಮೋಹನ ತರಂಗಿಣಿ ರಚನೆ:** ಕೃಷ್ಣಚರಿತ್ರೆ ಎಂದು ಕರೆದುಕೊಂಡ ಮೋಹನ ತರಂಗಿಣಿ ಕನಕದಾಸರ ಮೊದಲ ಕಾವ್ಯ. ವಿಜಯನಗರದ

ವೈಭವ ಮತ್ತು ಅದರಾಚೆಯ ಜನಜೀವನದ ವೈವಿಧ್ಯಮಯ ರಾಗರಸಭಾವಗಳ ಸಹಿತ ಬರೆದ ಮಹಾಕಾವ್ಯ.

**ಸಾವು–ನೋವು:** ಸಂಸಾರ ಸುಖಸಾಗರದಲ್ಲಿ ಸಾಗಿರುತ್ತ, ಒಂದು ದಿನ ತನ್ನ ಮಮತಾಮಯಿ ತಾಯಿ ತೀರಿಕೊಂಡಳು. ಇದಾಗಿ ವರ್ಷ ಕಳೆಯುವುದರ ಒಳಗಾಗಿ ಕರುಳಕುಡಿಯಾಗಿದ್ದ ಮಗು ತೀರಿಕೊಂಡಿತು. ಈ ಸಾಲುಸಾಲು ಸಾವುಗಳು ಆತನ ಮನದಿಂದು ಮೇಲೆ ಘೋರ ಪರಿಣಾಮವನ್ನು ಉಂಟುಮಾಡಿತು. ಅವಳೂ ತೀರಿಕೊಂಡಳು.

**ಕೊನೆಯ ಯುದ್ಧ:** ಒಂದು ಘನಘೋರ ಯುದ್ಧದಲ್ಲಿ ಕನಕನಾಯಕನಿಗೆ ದೊಡ್ಡ ಆಘಾತವಾಯಿತು. ರಕ್ತದ ಕಾಲುವೆ–ಹೆಣದ ರಾಶಿಗಳ ಮಧ್ಯೆ ಪ್ರಜ್ಞೆಯಿಲ್ಲದೆ ಏಕಾಂಗಿಯಾದ.

**ಯುದ್ಧದ ನಿರರ್ಥಕತೆ:** ಕನಕನಾಯಕನಿಗೆ ಲೌಕಿಕದ ದಾಸನಾಗಿ ಬದುಕುವುದಕ್ಕಿಂತ ಲೋಕದೊಡೆಯ ಭಗವಂತನ ದಾಸನಾಗುವುದೇ ಲೇಸೆಂದು ತಿಳಿಯಿತು.



**ವಿರಕ್ತಿಮಾರ್ಗ:** ಈ ತಿಳಿವು ಕನಕನಾಯಕನ ಬದುಕಿನ ದಿಕ್ಕುದೆಸೆಯನ್ನೇ ಬದಲಿಸಿತು. ಧರ್ಮ, ತತ್ವ, ಪುರಾಣಶಾಸ್ತ್ರಗಳ ಸಂಸ್ಕಾರ ಪಡೆದಿದ್ದ ಮನಸ್ಸು ವಿರಕ್ತಿಯ ಕಡೆಗೆ ವಾಲಿತು.

**ತಾತಾಚಾರ್ಯರ ಭೇಟಿ:** ತಾತಾಚಾರ್ಯರ ಭೇಟಿ. ಅವರ ಮೂಲಕ 'ಹರಿಯೇ ಸರ್ವೋತ್ತಮ' ಎಂಬ ತಿರುಳನ್ನು ಒಳಗೊಂಡಿದ್ದ ಶ್ರೀವೈಷ್ಣವ ತತ್ವಕ್ಕೆ ಕನಕ ಆಕರ್ಷಿತನಾದ.

**ಹರಿದಾಸನಾದ:** ಹರಿದಾಸನಾಗಬೇಕೆಂದು ನಿಶ್ಚಯಿಸಿದ ಬಳಿಕ ಅಧಿಕಾರ, ಅಂತಸ್ತು, ಅರಮನೆ, ಬಂಧು–ಬಳಗ ಎಲ್ಲವನ್ನು ತೊರೆದು ಲೌಕಿಕ ಲೋಕದ ವೇಷಭೂಷಣಗಳನ್ನು ಕಳಚಿ ಭಾಗವತನಾಗಿ ಬಯಲಿಗೆ ನಡೆದರು. ಕಾಗಿನೆಲೆಯಲ್ಲಿ ಲಕ್ಷ್ಮೀನರಸಿಂಹ ದೈವಸನ್ನಿಧಿಯ ಒಂದು ಪಾರ್ಶ್ವದಲ್ಲಿ, ಬಾಡದಿಂದ ತಂದಿದ್ದ ತಮ್ಮ ನೆಚ್ಚಿನ ಶ್ರೀರಂಗನಾಥಸ್ವಾಮಿ ಮೂರ್ತಿಯನ್ನು 'ಆದಿಕೇಶವ'ನ ಹೆಸರಿನಲ್ಲಿ ಪ್ರತಿಷ್ಠಾಪಿಸಿದರು.

**ವ್ಯಾಸರಾಯರ ಗರಡಿಯಲ್ಲಿ:** ಆ ಮೇಲೆ ವ್ಯಾಸರಾಯರನ್ನು ಮದನಪಲ್ಲಿಯ ಸಮೀಪದ ಕಂದಕೂರಿನಲ್ಲಿ 'ವ್ಯಾಸ ಸಮುದ್ರ' ಎಂಬ ಕೆರೆಯೊಂದನ್ನು ಕಟ್ಟಿಸುವ ಸಂದರ್ಭದಲ್ಲಿ ಭೇಟಿಯಾದರು. ಕೆಲವು ಕಾಲ ಅವರ ಮಠದಲ್ಲಿ ಕಳೆದರು. ಮಾರ್ಗದರ್ಶನ ಪಡೆದರು. ಗುರುಮಠದ ಶಿಷ್ಯರ ಅಸಹಿಷ್ಣುತೆಯ ನಡುವೆ ಜ್ಞಾನ ಪ್ರಕಟಣೆಗೆ ಹಲವು ಪ್ರಸಂಗಗಳನ್ನು ಎದುರಿಸಿ ಗೆದ್ದರು.

**ಕ್ಷೇತ್ರದರ್ಶನ:** ಹಂಪೆಯಿಂದ ಆರಂಭಿಸಿ ತಿರುಪತಿ, ಕನಕಗಿರಿ, ಶ್ರೀರಂಗ, ಬೇಲೂರು, ಮೇಲುಕೋಟೆ, ಶ್ರೀರಂಗಪಟ್ಟಣ, ಶಿವನಸಮುದ್ರ, ಮಹಾದೇವಪುರ, ಸೋಸಲೆ, ಪುರಿ, ಗಯಾ, ಮಥುರಾ, ದ್ವಾರಕೆ, ರಾಜಸ್ತಾನ, ಉಡುಪಿ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿದರು. ಕೀರ್ತನೆಗಳನ್ನು ರಚಿಸುತ್ತಾ ಜನರಿಗೆ ಬೋಧನೆಯನ್ನು ಮಾಡುತ್ತಾ ನಡೆದರು.

**ಹರಿಭಕ್ತಿಸಾರ:** ತೀರ್ಥಯಾತ್ರೆಯ ಆರಂಭದಲ್ಲೇ ಹಂಪೆಯಲ್ಲಿ 'ನೃಸಿಂಹಸ್ತವ' ಎಂಬ ಸ್ತುತಿಕಾವ್ಯವನ್ನೂ, ಬೇಲೂರಿನಲ್ಲಿ 'ಹರಿಭಕ್ತಿಸಾರ' ಎಂಬ ಭಕ್ತಿ ಕಾವ್ಯವನ್ನು ರಚಿಸಿದರು.

**ಕರ್ಮಭೂಮಿಯಲ್ಲಿ:** ಹೀಗೆ ನಾಡಿನ ಉದ್ದಗಲಕ್ಕೂ ಕ್ಷೇತ್ರಗಳಿಂದ ಕ್ಷೇತ್ರಗಳಿಗೆ ಸಂಚಾರ ಮಾಡಿ ಕೊನೆಗೆ ಕಾಗಿನೆಲೆಯನ್ನು ಕರ್ಮಭೂಮಿಯಾಗಿಸಿಕೊಂಡರು.

**ವ್ಯಾಸರಾಯರು–**

**ಪುರಂದರರ ಮರಣ:** ಗುರು ವ್ಯಾಸರಾಯರು ಹಾಗೂ ಸಹಚಿಂತಕರಾಗಿದ್ದ ಪುರಂದರದಾಸರು ತೀರಿಕೊಂಡರು. ಬಹುಕಾಲ ಮೆರೆದ ವಿಜಯನಗರ ಸಾಮ್ರಾಜ್ಯವು ತನ್ನ ಆಂತರಿಕ ತಿಕ್ಕಾಟಗಳಿಂದ ಪತನವಾಯಿತು.

**ನಳಚರಿತ್ರೆ;**

**ರಾಮಧಾನ್ಯ ಚರಿತ್ರೆ:** ಈ ನಡುವೆ 'ನಳಚರಿತ್ರೆ' ಕಾವ್ಯವನ್ನು ರಚಿಸಿದರು. ಜೊತೆಗೆ ಹಗಲಿರುಳು ದುಡಿದು ಅನ್ನ ಕೊಡುವ ಶ್ರಮಜೀವಿಗಳ ಪರವಾಗಿ 'ರಾಮಧಾನ್ಯ ಚರಿತ್ರೆ' ಎಂಬ ವಿಶಿಷ್ಟ ರೂಪಕ ಕಾವ್ಯ ರಚಿಸಿದರು.

**ಕೀರ್ತನೆಗಳು:** ಸಾಮಾಜಿಕ ಮತ್ತು ಪಾರಮಾರ್ಥಿಕ ಚಿಂತನೆಗಳನ್ನೊಳಗೊಂಡ ಕೀರ್ತನೆಗಳನ್ನು ಬರೆದರು. ಉಗಾಭೋಗ ಮುಂಡಿಗೆಗಳು ಸೇರಿ ಸುಮಾರು ೩೧೬ಕ್ಕೂ ಹೆಚ್ಚು ರಚನೆಗಳು ಕನಕದಾಸರ ಹೆಸರಿನಲ್ಲಿ ದೊರಕಿವೆ.

**ಆದಿ ಕೇಶವನ ಸೇವೆ:** ಅಲ್ಲಿಂದ ಮುಂದೆ ನಿತ್ಯವೂ ಕಾಗಿನೆಲೆ–ಕುಮ್ಮೂರು ಗಡಿಯಲ್ಲಿ ತಾವೇ ಹಿಂದೆ ಕಟ್ಟಿಸಿದ ಕೆರೆಯಲ್ಲಿ ಮಿಂದು ಬಂದು ಆದಿಕೇಶವನ ಸೇವೆಯಲ್ಲಿ ನಿರತರಾದರು. ಈಗಲೂ ಆ ಕೆರೆಯ ಕಾಲುವೆಯನ್ನು 'ಕನಕನಾಯಕರ ಕಾಲುವೆ' ಎಂತಲೂ, ಹೂದೋಟವನ್ನು 'ದಾಸನಕೊಪ್ಪ' ಎಂತಲೂ, ಅವರು ಕುಳಿತುಕೊಳ್ಳುತ್ತಿದ್ದ ಕಟ್ಟೆಯನ್ನು 'ಕನಕನ ಕಟ್ಟೆ' ಎಂತಲೂ ಕರೆಯುವುದನ್ನು ಕಾಣಬಹುದು.

**ಅಂತಿಮ ದಿನಗಳು:** ಸುಮಾರು ಒಂಭತ್ತು ದಶಕಗಳ ಕಾಲ ತುಂಬು ಜೀವನ ನಡೆಸಿದರು. ಆಗ ತಾವು ಕಟ್ಟಿಸಿದ ಕಾಗಿನೆಲೆಯ ಆದಿಕೇಶವನ ಗುಡಿಯಲ್ಲೇ ಕಾಲ ಕಳೆಯತೊಡಗಿದರು. 'ತೊರೆದು ಜೀವಿಸಬಹುದೇ ಹರಿ ನಿನ್ನ ಚರಣಗಳ' ಎಂಬುದು ಅವರ ಜೀವಿತದ ಏಕೈಕ ಮಂತ್ರವಾಯಿತು.

**ಮರಣ:** ಕ್ರಿ.ಶ. ೧೪೮೮ರ ಸುಮಾರಿನಲ್ಲಿ ಹುಟ್ಟಿದ ಕನಕದಾಸರು ೯೦ ಸಾರ್ಥಕ ವಸಂತಗಳನ್ನು ಪೂರೈಸಿ, ಕ್ರಿ.ಶ. ಸುಮಾರು ೧೫೭೮ರಲ್ಲಿ ಕಾಗಿನೆಲೆಯಲ್ಲಿ ಕೊನೆಯುಸಿರೆಳೆದರು.

**ಸಂಗ್ರಹ ನಿರೂಪಣೆ: ಕಾ.ತ.ಚಿಕ್ಕಣ್ಣ**



# ಕನಕದಾಸ ಆಗೋದು ಅಂದ್ರೆ.......

ಹೌದು, ಈ ರೀತಿ 'ಆಗೋದು' ಅಂತ ಇದೆ. ಇದು ಯಾಹೊತ್ತೂ ನಡೆಯುವ ಪ್ರಕ್ರಿಯೆ. ಆಗದಿದ್ದರೆ ಮನುಷ್ಯ ಹಿಂದೆ ಬೀಳುತ್ತಾನೆ, ದೇಶ ಹಿಂದೆ ಬೀಳುತ್ತದೆ. ಇಂಥ ಅಪೇಕ್ಷೆಯಿಂದಲೆ ಭಾರತದ ವಿದ್ಯಾವಂತರು ಅಮೇರಿಕಾದ ಥರ ಆಗಲು ಬಯಸುತ್ತಿದ್ದಾರೆ. ಇತ್ತೀಚೆಗೆ ಭಾರತದೇಶ ಚೀನಾದೇಶದ ಥರ ಅಭಿವೃದ್ಧಿ ಹೊಂದಬೇಕೆಂದು ತವಕಪಡುತ್ತಿದೆ. 'ಇರುವುದು' ಬೇರೆ, 'ಆಗುವುದು' ಬೇರೆ. ಇರುವುದು ಅಂದರೆ ಇದ್ದ ಹಾಗೆಯೆ ಇರುವುದು. ಆಗುವುದು ಎಂದರೆ ಕಾಲಕ್ಕೆ ಅನುಗುಣವಾಗಿ ಬದಲಾವಣೆಯಾಗಿ ಆ ಕಾಲಕ್ಕೆ ಹೊಂದಿಕೊಳ್ಳುವುದು. ಇದ್ದ ಹಾಗೆ ಇರುವುದು ಜನರ ಲಕ್ಷಣ. ಕಾಲಕ್ಕೆ ತಕ್ಕ ಹಾಗೆ ಹೊಂದಿ ಉತ್ತಮನಾಗಬಯಸುವುದು ಪ್ರಜ್ಞಾವಂತನ ಅಪೇಕ್ಷೆ. ಆದ್ದರಿಂದ ಬಹಳ ಕಾಲ ಅಕ್ಷರ ಜ್ಞಾನವಿಲ್ಲದಿದ್ದ ನಮ್ಮ ಜನ ಅಕ್ಷರ ಕಲಿಯಲು ಹಾತೊರೆಯುತ್ತಿದ್ದಾರೆ. ಅಕ್ಷರ–ಜ್ಞಾನ ಕಲಿತು ವಿದ್ಯಾವಂತರಾದವರು ಉತ್ತಮ ಉದ್ಯೋಗಕ್ಕೆ ಹೋಗಲು ಯತ್ನಿಸುತ್ತಾರೆ. ಅಲ್ಲಿಂದ ಪ್ರಮೋಷನ್ ಪಡೆದು ಇನ್ನೂ ಉತ್ತಮ ಸ್ಥಾನಮಾನ ಪಡೆಯಲು ಬಯಸುತ್ತಾರೆ. ಮತ್ತೂ ಹೆಚ್ಚಿನ ವಿದ್ಯೆ–ಜ್ಞಾನ ಇದ್ದರೆ ಅಮೇರಿಕಕ್ಕೂ, ಹೊರದೇಶಗಳಿಗೂ ಹೋಗಿ ಜ್ಞಾನಿ–ವಿಜ್ಞಾನಿಯಾಗಲು ಬಯಸುತ್ತಾರೆ. ಹೊಸದನ್ನು ಕಂಡುಹಿಡಿದು ಹೊಸ ಮನುಷ್ಯನಾಗಿ ಲೋಕಖ್ಯಾತಿಯನ್ನು ಪಡೆಯಲು ಯತ್ನ, ಪ್ರಯತ್ನ–ಹೋರಾಟ ನಡೆಸುತ್ತಾರೆ.

ಹೀಗೆ ಹೊಸದಾಗುವ ಪ್ರಯತ್ನ ನೆನ್ನೆ ಮೊನ್ನೆಯದಲ್ಲ. ಜ್ಞಾನದಲ್ಲೂ, ವಿಜ್ಞಾನದಲ್ಲೂ ವಿಶೇಷವಾದುದುದನ್ನು ಕಂಡುಕೊಳ್ಳಲು ಜೀವನವನ್ನು ಮುಡುಪಾಗಿಟ್ಟು ಹೋರಾಟ ಮಾಡಿದ ಹಲವರು ನಮ್ಮ ನಾಡಿನಲ್ಲಿ ಆಗಿ ಹೋಗಿದ್ದಾರೆ. ತಮ್ಮ ಸ್ವಂತ ಜೀವನವನ್ನು ಬದಿಗಿಟ್ಟು ತಪಸ್ಸಿನ ಥರದ ಬದುಕು ಸಾಗಿಸಿದ್ದಾರೆ. ಇಂಥವರನ್ನು ಜ್ಞಾನಿಗಳು, ವಿಜ್ಞಾನಿಗಳು, ಸಂತರು, ಮಹಾ ಪುರುಷರು ಎಂದೆಲ್ಲ ನಮ್ಮ ಸಮಾಜ ಕರೆದು ಗೌರವಿಸಿದೆ, ನಮನ ಸಲ್ಲಿಸಿದೆ. ಇವರು ಇಷ್ಟೆಲ್ಲ ಯಾಕೆ ಹೀಗೆ ಮಾಡುತ್ತಾರೆಂದರೆ ಜನರು ಬಡತನದಿಂದ ಸುಖಕ್ಕೆ; ಅಜ್ಞಾನದಿಂದ ಅರಿವಿಗೆ; ಕಪಟತನದಿಂದ ಧರ್ಮಕ್ಕೆ; ಸಾಮಾನ್ಯತ್ವದಿಂದ ಗುರುವಾಗುವ ಕಡೆಗೆ ಚಲಿಸಲಿ ಎಂದು. ಈ ಪಯಣದಲ್ಲಿ ಹಲವರು ಸೋಲುತ್ತಾರೆ, ಕೆಲವರು ಗೆಲ್ಲುತ್ತಾರೆ. ಸೋಲುವವರಿಗೆ ಸಹಮತ, ತಾಳ್ಮೆ, ತ್ಯಾಗ ಮಾನವ ಪ್ರೀತಿ ಎಂಬುದು ಸಿದ್ಧಿಸಿರುವುದಿಲ್ಲ. ಗೆದ್ದು ಸಾಧಕರಾಗುವವರಲ್ಲಿ ಸಮರ್ಪಣಾ

ಮನೋಭಾವ, ಮಾನವ ಪ್ರೀತಿ, ಅಂತಃಕರಣ, ಅನುಕಂಪ ತುಂಬಿರುತ್ತವೆ. ಎಲ್ಲವನ್ನೂ ಎಲ್ಲರನ್ನೂ ಅವರು ಸಮಾನವಾಗಿ ಕಾಣುತ್ತಾರೆ. ಸಮಾನವಾಗಿ ನಡೆಸಿಕೊಳ್ಳುತ್ತಾರೆ, ಹಾಗೂ ಎಲ್ಲರ ಪ್ರಗತಿ–ಪುರೋಭಿವೃದ್ಧಿಗಾಗಿ ಶ್ರಮಿಸುತ್ತಾರೆ. ಇಂಥ ಮಾನವರು ವಿರಳ.

ಇಂಥ ವಿರಳರಲ್ಲಿ ಕನಕದಾಸರೂ ಒಬ್ಬರು. ಅವರು ಮಗುವಾಗಿದ್ದುದು ತಿಮ್ಮಪ್ಪನಾಗಿ, ವಂಶದ ನಿಯಮದಂತೆ ಆದುದು ತಿಮ್ಮಪ್ಪನಾಯಕನಾಗಿ. ಸಾಧನೆಯಿಂದ ಏರಿದ್ದು ಡಣಾಯಕ ತಿಮ್ಮಪ್ಪನಾಯಕನಾಗಿ. ಆದರೆ ಆತ ಕನಕದಾಸನೆಂಬ ಸಂತ, ಕವಿ ಮತ್ತು ಮಾನವ ಪ್ರೇಮಿ ಮಹಾತ್ಮನಾದುದು ಹೇಗೆ? ಯಾಕೆ? ಇದನ್ನೆ ನಾವು ಪ್ರಗತಿ, ಶ್ರೇಯೋಭಿವೃದ್ಧಿ, ವಿಕಾಸ, ಸಂಸ್ಕಾರ, ಸಾಧನೆ, ಸಂತತ್ವ, ಗುರುವಾಗುವುದು ಎಂದು ಹೇಳುವುದು. ಹೀಗೆ ತಿಮ್ಮಪ್ಪ, ತಿಮ್ಮಪ್ಪನಾಯಕ, ಡಣಾಯಕ ತಿಮ್ಮಪ್ಪನಾಯಕ, ಕನಕ, ಕನಕದಾಸ, ಸಂತ/ಯೋಗಿ, ಕವಿ ಆದ ಬಗೆ ಒಂದು ರೋಚಕ ಕಥೆ. ಎಲ್ಲಕ್ಕಿಂತ ಮುಖ್ಯವಾಗಿ ಕುರುಬ ಸಮುದಾಯದಲ್ಲಿ ಹುಟ್ಟಿದವನೊಬ್ಬ ಹೀಗೆ ಸಂತ, ಲೋಕಗುರು ಆಗುವುದು ಭಾರತದ ಸಾಂಸ್ಕೃತಿಕ ಇತಿಹಾಸದಲ್ಲಿ ಕಡಿಮೆ. ಇದೂ ಒಂದು 'ಕುರುಬ ರಾಮಾಯಣ', 'ಕರ್ನಾಟಕ ರಾಮಾಯಣ', 'ಶೂದ್ರರಾಮಾಯಣ'. ಇನ್ನೂ ಮುಂದೆ ಹೋಗಿ ಹೇಳುವುದಾದರೆ ಭಾರತದ ತಳವರ್ಗಗಳ ಹೋರಾಟದ, ನವಯುಗದ 'ಅಭಿವೃದ್ಧಿ ರಾಮಾಯಣ' ಎನ್ನಬಹುದು. ಇದು ಉತ್ಪ್ರೇಕ್ಷೆಯ ಮಾತಲ್ಲ; ನೀವೇ ಓದಿನೋಡಿ ಕನಕದಾಸರು ಬರೆದಿರುವ 'ರಾಮಧಾನ್ಯ ಚರಿತ್ರೆ' ಎಂಬ ಕಾವ್ಯವನ್ನು.

ನಾವು ಇಲ್ಲಿ ಕನಕದಾಸರ ಬಗ್ಗೆ ತಿಳಿಸಿಕೊಡುತ್ತಿರುವುದು ಅವರೊಬ್ಬ ಕುರುಬ ಸಮುದಾಯದವರು ಎನ್ನುವ ಕಾರಣಕ್ಕೆ ಅಲ್ಲ. ಕನ್ನಡ ಸಂಸ್ಕೃತಿ ನಿರ್ಮಾತೃಗಳ ಪಟ್ಟಿಯಲ್ಲಿ ಇರುವ ಒಬ್ಬ ಧಾರ್ಮಿಕ, ಸಾಂಸ್ಕೃತಿಕ ಧ್ರುವತಾರೆ ಎನ್ನುವ ಕಾರಣಕ್ಕೆ ಅಥವ ತಳವರ್ಗಗಳ ಅಭಿವೃದ್ಧಿಯ ಮಹಾನ್ ಮಾರ್ಗದರ್ಶಕ ಎನ್ನುವ ಕಾರಣಕ್ಕೆ. ಕರ್ನಾಟಕದಲ್ಲಿ ಇಂಥ ಮಹತ್ವದ ಮೊದಲ ಸಾಂಸ್ಕೃತಿಕ ನಾಯಕ ವಚನ ಚಳುವಳಿಯ ಪಿತಾಮಹ ಬಸವಣ್ಣ. ಆನಂತರದಲ್ಲಿ ಬಂದವನೆ ಕನಕದಾಸ. ಬಹಳ ಕಾಲದವರೆಗೆ ಅವನನ್ನು ಒಂದು ಧರ್ಮದ ವಕ್ತಾರ ಅಥವಾ ಪ್ರಚಾರಕ ಎಂಬ ಮರೆವಿನ ಅರಿವಿನಲ್ಲೆ ನೋಡಲಾಯಿತು. ಯಾಕೆಂದರೆ ಅವನ ಹಿಂದೆ ಒಂದು ಪ್ರಜ್ಞಾವಂತ ಜನವರ್ಗ ಬೆಂಬಲಕ್ಕೆ ಇರಲಿಲ್ಲ. ಹೇಗೊ ಬಂದು ಎಲ್ಲೊ ಹೊರಟುಹೋದ ಒಬ್ಬ ಅಲೆಮಾರಿ ಸಂತ ಎಂಬಂತೆ ಗುರುತಿಸಲಾಯಿತು. ಅವನು ಕೀರ್ತನೆಗಳ ಮೂಲಕ ಸಿಡಿಸಿದ ಸಮಾನತೆಯ ಬೆಳಕು ಮಂದದೃಷ್ಟಿಯ ಮಂದಿಗೆ ಕಾಣಲೇ ಇಲ್ಲ. ಜ್ಞಾನ–ವಿಜ್ಞಾನ ಪರಾಮರ್ಶೆ ಮಾಡುವ ಇಪ್ಪತ್ತನೆಯ ಶತಮಾನ ಅವತರಿಸಿದಾಗಲೇ 'ಓಹೋ, ಇಲ್ಲೊಬ್ಬ ಭಾರತದ ಸಮತಲ ಸಂಸ್ಕೃತಿಯ ಚಿಂತಕ ಹುಟ್ಟಿ ಹೋಗಿದ್ದಾನೆ. ನಮ್ಮ ಮರೆವೆಯ ಮಂಪರಿನಲ್ಲಿ ಅವನು ಕಾಣಲೇ ಇಲ್ಲವಲ್ಲ', ಎಂಬ ಸಂಗತಿ ನಮ್ಮ



ಗ್ರಹಿಕೆಗೆ ಬಂದದ್ದು.

ಈಗ ನಾವು ಹೊರಟಿರುವುದು ಆ ಕನಕದಾಸನನ್ನು ಕಾಣಲು. ಅಂದರೆ ಶೋಷಿಸಿಕೊಳ್ಳುವುದೇ ನಮ್ಮ ಬದುಕು ಎಂದು ನಂಬಿದ್ದವರ ಬದುಕು ತೆರೆಸಲು ಮನವ ಹದಗೊಳಿಸಲು ಹೊರತು ಅನ್ಯತಾ ಅಲ್ಲ. ಯಾಕೆಂದರೆ ಪ್ರಜಾಪ್ರಭುತ್ವದ ನೀತಿಯೆ ಎಲ್ಲರೂ, ಎಲ್ಲವೂ ಎಲ್ಲರಿಗಾಗಿ, ಎಲ್ಲರ ಅಭಿವೃದ್ಧಿಯೇ ದೇಶದ ಅಭಿವೃದ್ಧಿ ಎಂಬ ನಿಯಮವನ್ನು ಸಾಕಾರಗೊಳಿಸಲು. ಬನ್ನಿ, ಅದು ಹೇಗೆ ಕನಕದಾಸರಲ್ಲಿ ಸಾಕಾರಗೊಂಡಿದೆ ಎಂಬುದನ್ನು ನೋಡೋಣ.

ಹಿಂದೆಯೆ ಹೇಳಿದೆ: ತಿಮ್ಮಪ್ಪ, ತಿಮ್ಮಪ್ಪನಾಯಕ, ಡಣಾಯಕ ತಿಮ್ಮಪ್ಪನಾಯಕ, ಕನಕ, ಕನಕದಾಸನಾಗಿ ಹಂತ ಹಂತವಾಗಿ ಕನಕದಾಸರು ಪ್ರಸಿದ್ಧಿಗೆ ಬಂದರು. ಈ ಹಂತ ಹಂತದ ಹೆಸರುಗಳನ್ನು ಗಮನಿಸಿದರೆ ಪ್ರತಿಯೊಂದು ಹೆಸರಿನ ಹಿಂದೆ ಒಂದು ಸಾಂಸ್ಕೃತಿಕ ಚರಿತ್ರೆ ಇದೆ. ರಾಜರು–ರಾಜಕಾರಣದ ಇತಿಹಾಸವನ್ನು ಹೇಳುವ ವಿವರಗಳನ್ನೇ ನಾವು ಚರಿತ್ರೆ ಎಂದು ತಿಳಿದಿದ್ದೇವೆ. ಜನರದೇ ಒಂದು ಚರಿತ್ರೆ ಇದೆ. ಅವರು ಬಾಳಿ–ಬದುಕಿದ ರೀತಿ, ಅವರ ಆಚರಣೆ, ಚಿಂತನಾಕ್ರಮ ಮತ್ತು ಅವುಗಳ ಹುಟ್ಟು, ಬೆಳವಣಿಗೆ ಮತ್ತು ಅನುಸರಣೆಗೆ ಕಾರಣವಾದ ಐತಿಹಾಸಿಕ ಸಂದರ್ಭ – ಈ ಎಲ್ಲವೂ ಒಟ್ಟುಗೂಡಿ ಹರಿದು ಬಂದ, ಹರಿಯುತ್ತಿರುವ ಜೀವನ ಕ್ರಮವನ್ನೇ ನಾವು ಜನಪದ ಇತಿಹಾಸ ಎಂದು ಕರೆಯುತ್ತೇವೆ. ಇದರಲ್ಲಿ ಒಬ್ಬ ವ್ಯಕ್ತಿ ಹುಟ್ಟಿದ, ಬೆಳೆದ, ಪಡೆದ, ನಡೆದ–ಹೆಸರು, ಸ್ಥಳ, ಘಟನೆ, ಅಧಿಕಾರ, ಹೋರಾಟದಂಥ ಕ್ರಿಯೆಗಳು ಸೇರುತ್ತವೆ. ತಿಮ್ಮಪ್ಪನಿಂದ ಕನಕದಾಸರಾದವರೆಗಿನ ಸಾಂಸ್ಕೃತಿಕ ಘಟನಾವಳಿಯನ್ನು ಅವರ ಜೀವನ–ಜನಪದ ಇತಿಹಾಸ ಎಂದು ಕರೆಯುತ್ತೇವೆ. ವಿಶೇಷವೆಂದರೆ ಕನಕದಾಸರಿಗೆ ಮೂರು ಮಗ್ಗುಲಿನ ಇತಿಹಾಸವಿದೆ.

**(೧) ಧಾರ್ಮಿಕ ಇತಿಹಾಸ:**

ಎಂದರೆ ತಿಮ್ಮಪ್ಪ ಎಂಬ ಹೆಸರಿಗೆ ಕಾರಣ ಕನಕದಾಸ ತಿರುಪತಿ ತಿಮ್ಮಪ್ಪನ ವರದಿಂದ ಹುಟ್ಟಿದವನು. ಕೊನೆಯಲ್ಲಿ ಶ್ರೀವೈಷ್ಣವ ಧರ್ಮದ ನೆಲೆಯಲ್ಲಿ ಕ್ರಿಯಾಶೀಲನಾದವನು. (ಜೀವನವೇ ಧರ್ಮ, ಅದನ್ನು ಬಿಟ್ಟು ಬೇರೆ ಇಲ್ಲ ಎಂದು ಬದುಕುವುದು. ಪುರೋಹಿತವರ್ಗ ಇದಕ್ಕೆ ಉದಾಹರಣೆ. ದಲಿತರೊ, ರೈತರೊ ಹಾಗೆ ಬದುಕುವುದಿಲ್ಲ. ಕನಕದಾಸರು ಧರ್ಮವನ್ನು ಮೀರಲಿಲ್ಲ. ಅದರ ಜನಮುಖಿ ಸ್ವರೂಪ ಏನು ಎಂಬುದನ್ನು ತಿಳಿಸಿಕೊಟ್ಟರು)

**(೨) ರಾಜಕೀಯ ಇತಿಹಾಸ:**

ತಿಮ್ಮಪ್ಪನಾಯಕ ಎಂಬ ಹೆಸರಿನ ಹಿನ್ನೆಲೆ ಎಂದರೆ ಆತನ ವಂಶಸ್ಥರು ನಾಯಕ

ಸ್ಥಾನದಲ್ಲಿ ಕೆಲಸ ಮಾಡಿದವರು ಎಂದರ್ಥ. ವಿಜಯನಗರ ಆಳ್ವಿಕೆಯ ಕಾಲದಲ್ಲಿ ಅವರ ವಂಶ ನಾಯಕಪಟ್ಟದ ಸ್ಥಾನವನ್ನು ಪಡೆದಿತ್ತು ಎಂಬುದು ತಿಳಿಯುತ್ತದೆ. ಇದೇ ತಿಮ್ಮಪ್ಪನಾಯಕ ಮುಂದೆ ಡಣಾಯಕ ತಿಮ್ಮಪ್ಪನಾಯಕನಾಗುತ್ತಾನೆ. ಎಂದರೆ ರಾಜ್ಯಾಧಿಕಾರದಲ್ಲಿ ಈತನಿಗೆ ಒಂದು ನಿರ್ದಿಷ್ಟ ಸ್ಥಾನ ಇತ್ತು ಎಂಬುದು ಗೊತ್ತಾಗುತ್ತದೆ.

**(೩) ಸಾಮಾನ್ಯತಾ ಇತಿಹಾಸ:**

ಇದನ್ನು ಜನಪದ ಇತಿಹಾಸ ಅಥವಾ ಮೌಖಿಕ ಇತಿಹಾಸ ಎಂಬು ಕರೆಯುತ್ತಾರೆ. ಯಾವುದೇ ವ್ಯಕ್ತಿ, ಸಂಘಟನೆ, ನಾಡು, ದೇಶ, ಜನರಿಗೆ ಒಂದು ಸಾಮಾನ್ಯ ಇತಿಹಾಸವಿರುತ್ತದೆ. ಅದು ದಿನನಿತ್ಯದ ಹಾಗೂ ವಿಶೇಷ ಆಚರಣಾ ಸಂದರ್ಭದಲ್ಲಿ ದಾಖಲಾದ ಇತಿಹಾಸ. ಇದನ್ನೇ ನಾವು ಜನಪದ ಅಥವಾ ಸಾಂಸ್ಕೃತಿಕ ಇತಿಹಾಸವೆಂದು ಕರೆಯುತ್ತೇವೆ.

ಕನಕದಾಸರು ಮೊದಲಿಗೆ ಸಾಮಾನ್ಯರಾಗಿದ್ದರು. ನಂತರ ನಾಯಕರಾದರು. ಆನಂತರ ಡಣಾಯಕರಾದರು. ಮಹಾ ರೂಪಾಂತರ ಪಡೆದು ಕನಕದಾಸರು, ಧಾರ್ಮಿಕ ವಕ್ತಾರರಾಗಿ ಒಂದು ಧರ್ಮ ಪಂಥದ ಒಳಗೆ ದಾಸರಾದರು. ಅವರೆ ಈಗ ನಮ್ಮ ಮುಂದೆ ಇರುವ ಕನಕದಾಸರು. ಕನಕದಾಸರಿಗೆ ಮತ್ತೊಂದು ಪ್ರಮುಖ ಇತಿಹಾಸವಿದೆ. ಅದು ಕನಕದಾಸರು ಕವಿ ಎಂಬುದು. ಕನಕದಾಸರಿಗೆ ಎಷ್ಟು ರೂಪಾಂತರಗಳಿವೆ ನೋಡಿ. ನಾಡಿನ-ದೇಶದ ಇತಿಹಾಸದಲ್ಲಿ ಅಳಿಸಲಾಗದ ದಾಖಲೆಯಾಗಿದ್ದಾರೆ ಎನ್ನುವುದೇ ನಮ್ಮ ಮುಂದೆ ಇರುವ ಚೋದ್ಯ!

ಈಗ ಇಷ್ಟೊಂದು ಕಾಳಜಿಯಿಂದ ಕನಕದಾಸರನ್ನು ಓದುವ ಅಗತ್ಯವೇನು ಎಂದು ಅನಿಸಬಹುದು. ಅದಕ್ಕೂ ಒಂದು ರಾಜಕೀಯ ಇದೆ. ಅದನ್ನು ಸಾಂಸ್ಕೃತಿಕ ರಾಜಕಾರಣ ಎಂದು ಕರೆಯುತ್ತಾರೆ. ರಾಜಕಾರಣಿಗಳ ರಾಜಕೀಯದಿಂದ ಪಡೆಯಲಾಗದ್ದನ್ನು ಜನ, ಜನಸಮೂಹಗಳು ಸಾಂಸ್ಕೃತಿಕ ರಾಜಕಾರಣದಿಂದ ಪಡೆಯುವುದು ಚರಿತ್ರೆಯುದ್ದಕ್ಕೂ ನಡೆದು ಬಂದಿದೆ. ರಾಜ, ರಾಜಕಾರಣಿ ಕೊಡುವುದು ಮೇಲಿನಿಂದ; ಕಾಸು, ಕೊಸರು, ಅಭಿವೃದ್ಧಿ ಅಂತ ಚೂರು-ಪಾರು ಅನುಕೂಲ ಮಾಡಬಹುದು. ಇದು ಅಲ್ಪ, ಮತ್ತು ಸದ್ಯದ ತಿರುವು. ಒಂದು ಸಮುದಾಯ (ಜಾತಿ, ವರ್ಗ, ಪಂಥ)ಕ್ಕೆ ಇಷ್ಟೇ ಸಾಲದು. ಆ ಸಮುದಾಯ ತನ್ನೊಳಗಿಂದಲೇ ಸಶಕ್ತವಾದಾಗ ಅದು ತನ್ನ ಸಮುದಾಯದೊಳಗಿಂದ ಹೆಚ್ಚಿನದನ್ನು ಉತ್ಪಾದನೆ ಮಾಡಿ ಪಡೆಯಬಹುದು. ರಾಜಕೀಯ ಪ್ರಭಾವದಿಂದಲು ಹೆಚ್ಚಿನದನ್ನು ಪಡೆಯಬಹುದು. ಸಮುದಾಯದಿಂದ ದತ್ತಕವಾಗುವ ಶಕ್ತಿ ಹಾಗೂ ರಾಜಕೀಯ ಒತ್ತಡ ಪ್ರಭಾವ ಮತ್ತು ಭಾಗವಹಿಸುವಿಕೆಯಿಂದಲೂ ಹೆಚ್ಚಿನದನ್ನು ಪಡೆಯಬಹುದು. ಕಡಿಮೆ ಶಕ್ತಿ ಇರುವ ಸಮುದಾಯ ಕಡಿಮೆ ಅನುಕೂಲ ಪಡೆಯುತ್ತದೆ, ಹೆಚ್ಚಿನ ಶಕ್ತಿ ಇರುವ



ಸಮುದಾಯ ಹೆಚ್ಚಿನದನ್ನು ಪಡೆಯುತ್ತದೆ. ಕರ್ನಾಟಕದಲ್ಲಿ ಮೇಲು ಜಾತಿ, ಮೇಲು ವರ್ಗಗಳು ಹೇಗೆ, ಏನು ಪಡೆಯುತ್ತಿವೆ ಎಂಬುದು ನಿಮಗೆ ಗೊತ್ತು. ಹಾಗೆಯೆ ತಳಕೆಳವರ್ಗಗಳು ಎಂಥ ಪಾಲು ಪಡೆಯುತ್ತಿವೆ ಎಂಬುದೂ ನಿಮಗೆ ತಿಳಿಯದ ವಿಷಯವಲ್ಲ.

ಭಾರತದ ರಾಜಕೀಯ ಶಕ್ತಿಯ ಇತಿಹಾಸವನ್ನು ಬಲ್ಲವರು ಭಾರತದ ಸಾಂಸ್ಕೃತಿಕ ಇತಿಹಾಸದ ಶಕ್ತಿಯನ್ನೂ ತಿಳಿದು ನೋಡಬೇಕಿದೆ. ಭಾರತದಲ್ಲಿ ಜಾತಿ-ಜಾತಿಗಳಿವೆ. ಜಾತಿಯ ಇತಿಹಾಸವೂ ಇದೆ. ಈ ಜಾತಿಗಳು ಅವುಗಳ ವೃತ್ತಿ ಮತ್ತು ಅದರ ಸಂಸ್ಕೃತಿಯ ಮೇಲೆ ಶ್ರೇಷ್ಠ ಅಥವ ಕನಿಷ್ಠ ಎನಿಸಿಕೊಂಡಿವೆ. ಪೌರೋಹಿತಿಕೆ, ಪೂಜೆ ಮಾಡುವ ವೃತ್ತಿಯವರನ್ನು ಶ್ರೇಷ್ಠರು ಎಂದು ಕರೆಯಲಾಗಿದೆ. ತಾವು ಸಾಂಸ್ಕೃತಿಕವಾಗಿ ಪೌರೋಹಿತ್ಯ-ಪೂಜೆ ಮಾಡುವುದರಿಂದ ಶ್ರೇಷ್ಠರು. ಇತರರು ತಮ್ಮ ಉಪದೇಶ ಮತ್ತು ಮಾರ್ಗದರ್ಶನದಿಂದ ನಡೆಯುವವರಾದ್ದರಿಂದ ಅವರು ತಮ್ಮ ಕೆಳಗೆ ಬರುವವರು ಎಂದು ಅವರು ವಿಧಿನಿಯಮ ಮಾಡಿದ್ದಾರೆ. ಅವರು ಈ ದೇಶದಲ್ಲಿ ಎಲ್ಲವನ್ನೂ ಎಲ್ಲರನ್ನೂ ನಿಯಂತ್ರಿಸುತ್ತಾ ತಮ್ಮ ಸುಖ-ಸಂತೋಷ-ಸೌಖ್ಯವನ್ನು ಕಾಪಾಡಿಕೊಂಡರು. ಅದಕ್ಕೆ ಪ್ರಮುಖ ಕಾರಣ ತಾವು ಸಾಂಸ್ಕೃತಿಕ ಶಕ್ತರು ಎಂದು ಗುರುತಿಸಿಕೊಂಡದ್ದು ಮತ್ತು ಭಾರತದಲ್ಲಿ ಸಾಂಸ್ಕೃತಿಕ ಅಧಿಕಾರ ನಡೆಸಿದ್ದು. ಇದರಿಂದ ನಮಗೆ ಸ್ಪಷ್ಟವಾಗುವುದೆಂದರೆ ದಿನ ದಿನದ ರಾಜಕೀಯ ಶಕ್ತಿಗಿಂತ ನಿತ್ಯ ನಿರಂತರವಾದ ಸಾಂಸ್ಕೃತಿಕ ಶಕ್ತಿಯೆ ಪ್ರಬಲವಾದುದು ಎಂಬುದು. ಅವನ್ನು ಪಡೆಯಲೆಂದೆ ಸಾವಿರಾರು ಪ್ರಯತ್ನಗಳು, ಸಾಂಸ್ಕೃತಿಕ ಧಾರ್ಮಿಕ ಸಂಘರ್ಷಗಳು ನಡೆದಿವೆ. ಅಂಥ ಕೆಲವು ಘಟನೆಗಳು ಕರಾಳವಾಗಿವೆ ಮತ್ತೆ ಕೆಲವು ಘಟನೆಗಳು ಸೌಮ್ಯ ಸಾಂಸ್ಕೃತಿಕ ಸಂಘರ್ಷಗಳಾಗಿವೆ. ಕನಕದಾಸರು ಈ ಎರಡನೆಯ ಪಂಥಕ್ಕೆ ಸೇರಿದ್ದಾರೆ. ಆಯುಧ ಹಿಡಿದಿದ್ದ ಡಣಾಯಕ ಆಯುಧವನ್ನು ನೆಲಕ್ಕೆ ಹಾಕಿ-ಸಾಂಸ್ಕೃತಿಕ ಸೌಮ್ಯ ಮತ್ತು ವಿಕಾಸಶೀಲ ಯುದ್ಧವನ್ನು ಮಾಡಿದ್ದಾರೆ. ಹಾಗೆಯೆ ಗೆದಿದ್ದಾರೆ ಕೂಡ. ಅಂಥ ಮಾರ್ಗದ ಅರಿವನ್ನೆ ನಾವು ಈ ಹೊತ್ತು ಕನಕದಾಸರಿಂದ ಕಲಿಯಬೇಕಿದೆ.

ಮನುಷ್ಯನು ಯಾಹೊತ್ತೂ ತನ್ನನ್ನು ಮೇಲೆರಿಸಿಕೊಳ್ಳಲು ಮೊದಲು ಅವಲಂಬಿಸುವುದು ತಾನು ನಂಬುವ ದೇವರನ್ನು ಮತ್ತು ಅವನು ಪ್ರತಿಪಾದಿಸುವ ಧರ್ಮವನ್ನು. ಆ ದೇವರು-ಧರ್ಮ ತನ್ನ ಮೇಲೇರುವಿಕೆಗೆ (ಸಾಧನೆಗೆ) ಸಹಾಯಕ, ಸಹಕಾರಿ, ಸಮರ್ಥನೆ ಮತ್ತು ಸಹ್ಯ ಅನಿಸದಿದ್ದರೆ ಆ ವ್ಯಕ್ತಿ ಬೇರೊಂದು ಸೂಕ್ತ ಎನಿಸಿದ, ಆ ಕಾಲಕ್ಕೆ ಅಸಲಿ ಎನಿಸಿರುವ ದೇವರು ಧರ್ಮದ ಕಡೆಗೆ ಪಯಣ ಮಾಡುತ್ತಾನೆ. ಇದು ನಮಗೆಲ್ಲ ಗೊತ್ತಿರುವ ಸರಳ ಸಂಗತಿ. ಇದರಲ್ಲಿ ಸಾಮಾನ್ಯವಾದುದನ್ನು ಪಡೆಯುವವರೂ ಇದ್ದಾರೆ ದೊಡ್ಡದನ್ನು ಸಾಧನೆ ಮಾಡುವವರೂ ಇದ್ದಾರೆ. ಕನಕದಾಸರು ಇಂಥ ದೊಡ್ಡದನ್ನು ಸಾಧಿಸಿದ ಮಹಾತ್ಮ. ಅವರ ಜೀವನ

ವೃತ್ತಾಂತವನ್ನು ಅರಿತರೆ ಅದು ಸ್ಪಷ್ಟವಾಗುತ್ತದೆ. ಅದಕ್ಕಾಗಿಯೆ ಅವರ ಕೃತಿಗಳನ್ನು ಓದಬೇಕಾಗುತ್ತದೆ ಮತ್ತು ಅವರ ಜೀವನ ವೃತ್ತಾಂತವನ್ನು ತಿಳಿಯಬೇಕಾಗುತ್ತದೆ.

ಇದಕ್ಕೆ ಕನಕದಾಸರೆ ಯಾಕೆ ಎನ್ನುತ್ತೀರಾ? ಬೇರೆಯವರೂ ಆಗಬಹುದು. ಬಸವಣ್ಣ ಮತ್ತು ಅವನ ಹಿಂದೆ ಅನೇಕ ಸಮುದಾಯಗಳ ಸಾಂಸ್ಕೃತಿಕ ನಾಯಕರು ಇಂಥ ಕೆಲಸ ಮಾಡಿದ್ದಾರೆ. ವಚನಕಾರರ ನಂತರ ಹಿನ್ನೆಲೆಗೆ ಸರಿದ ಸಮಾನತಾ ಚಿಂತನೆ ಮತ್ತೆ ಚಿಗುರೊಡೆಯುವುದು ಕನಕದಾಸರಲ್ಲಿ. ಒಂಟಿ ಧ್ವನಿಯಾಗಿ ಅವರು ಧಾರ್ಮಿಕ ಕರ್ಮಠರನ್ನು ಎದುರಿಸಿದ ರೀತಿ ಐತಿಹಾಸಿಕವಾಗಿ ಬಹಳ ಮುಖ್ಯವೆನಿಸುತ್ತದೆ. ಇಪ್ಪತ್ತನೆಯ ಶತಮಾನದ ಸಮಾನತಾ ಸಮಾಜದ ಉದಯದ ಹಿಂದೆ ಒಂದು ಒಂಟಿ ಧ್ವನಿ ಸರ್ವರ ಸಮಾನತೆಗಾಗಿ ತುಡಿದಿದೆ, ನುಡಿದಿದೆ ಮತ್ತು ಕರ್ನಾಟಕದಾದ್ಯಂತ ನಡೆದಿದೆ ಎಂದರೆ ಅದು ಆಶ್ಚರ್ಯದ ಸಂಗತಿಯಲ್ಲವೆ? ಅದಕ್ಕಾಗಿಯೆ ಕನಕದಾಸರನ್ನು ಓದಬೇಕು, ತಿಳಿಯಬೇಕು.

**ಡಾ. ಹಿ ಶಿ ರಾಮಚಂದ್ರೇಗೌಡ**



# ಕನಕದಾಸರ ಲೋಕದರ್ಶನ

**ಕವಿಯಾಗಿ ಜನಿಸುವುದು ವಿರಳ. ದಾರ್ಶನಿಕವಾಗಿ ಜನಿಸುವುದು ಇನ್ನೂ ವಿರಳ. ಆದರೆ ಒಬ್ಬನೇ ವ್ಯಕ್ತಿ ಕವಿಯೂ ಆಗಿ ದಾರ್ಶನಿಕನೂ ಆಗಿ ಜನಿಸುವುದು ಅತ್ಯಂತ ವಿರಳ ಮತ್ತು ಅಪರೂಪ.**

– ಜಾನ್ ಡ್ರಿಂಕ್ ವಾಟರ್ನ್, ಆಂಗ್ಲಲೇಖಕ.

ಸಂತಕವಿ ಕನಕದಾಸರ ವಿಚಾರದಲ್ಲಿ ಈ ಮಾತು ದಿಟವೇ ಆಗಿದೆ. ಇನ್ನೂ ಮುಂದುವರಿದು ಹೇಳಬೇಕೆಂದರೆ ಒಬ್ಬ ಪಾಳೇಗಾರನ ಮನೆತನದಲ್ಲಿ ಹುಟ್ಟಿ ಬಯಲು–ದಾಸನಾಗುವವರೆಗಿನ ಕನಕರ ಜೀವನದ ದಾಟುಗಳನ್ನು ಗಮನಿಸಿದರೆ, ಅವರೊಳಗೆ ಹಲವು ವ್ಯಕ್ತಿತ್ವಗಳು ಕಾಣಸಿಗುತ್ತವೆ. ತಿಮ್ಮಪ್ಪನಾಗಿ ಹುಟ್ಟಿ, ಹರೆಯಕ್ಕೆ ಕಾಲಿರಿಸಿದಾಗ ತಿಮ್ಮಪ್ಪನಾಯಕನಾಗಿ, ಪ್ರೌಢಾವಸ್ಥೆಯಲ್ಲಿ ಕನಕಪ್ಪ, ಕನಕ ನಾಯಕನಾಗಿ, ಆನಂತರ ಕನಕದಾಸರಾಗುವ ಹಂತಗಳನ್ನು ಗಮನಿಸಬೇಕು. ಆದರೆ ಮೀಮಾಂಸೆ ಬೋಧಕರು ಈತನಕ, ಅವರೊಬ್ಬ ಕವಿ ಎಂಬುದನ್ನು ಪ್ರಧಾನ ವಿವೇಚನೆಗೆ ಎತ್ತಿಕೊಳ್ಳದೆ ಭಕ್ತ, ದಾಸ, ಕೀರ್ತನಕಾರ ಅಂತ ಸಿದ್ಧಮಾದರಿಯಲ್ಲಿಯೇ ಹೇಳುತ್ತ ಬಂದಿದ್ದಾರೆ. ಈ ಮಾನದಂಡವನ್ನೇ ಮುಂದುವರಿಸಿದರೆ ಕನಕದಾಸರ ಸಾಮಾಜಿಕ ಆಯಾಮಗಳನ್ನು ತೆರೆದಿಟ್ಟಂತಾಗುವುದಿಲ್ಲ. ಇದು ಹಾಗೆ ನೋಡುವವರ ಗ್ರಹಿಕೆ ಮತ್ತು ವಿವರಣೆಗಳ ಮಿತಿ ಆಗುತ್ತದೆ. ಆದ್ದರಿಂದ ಕನಕರನ್ನು ಪ್ರತ್ಯೇಕವಾಗಿಯೂ; ಕನಕದಾಸ ಆಕೃತಿಯೊಳಗೆ ಮಿಳಿತಗೊಂಡ ಹಲವು ಮುಖಗಳನ್ನು ಅಖಂಡವಾಗಿಯೂ ಗ್ರಹಿಸಬೇಕಿದೆ. ಮಧ್ವ ಕಿಂಡಿ ಮೂಲಕವಲ್ಲದೆ ಕನಕನ ಕಿಂಡಿಯೊಳಗೂ ಪ್ರವೇಶಿಸಬೇಕಿರುವುದು ಅಗತ್ಯವಾಗಿದೆ. ಆಗ ಮಾತ್ರ ಕನಕರನ್ನು ಹೆಚ್ಚು ಅರ್ಥ ಮಾಡಿಕೊಳ್ಳಲು ಅನುವುಸಿಗುತ್ತದೆ. ಅಲ್ಲದೆ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ತಲ್ಲಣಗಳ ಮೂಲವನ್ನು ಮನನ ಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಸಮಾಜವನ್ನು ಮಾನವೀಯ ನೆಲೆಯಲ್ಲಿ ಕಟ್ಟುವ ತಲ್ಲಣಗಳಿಲ್ಲದ ಯಾವ ಸಾಹಿತಿಯೂ ಜಗತ್ತಿನಲ್ಲಿ ಶ್ರೇಷ್ಠ ಸಾಹಿತ್ಯವನ್ನು ನೀಡಲಾರ. ಅದಿಲ್ಲದ ಸಾಹಿತ್ಯವು ಕಾಲದ ನಡುಗೆಯಲ್ಲಿ ತಾಳಿಕೊಳ್ಳುವುದೂ ಇಲ್ಲ; ಬಾಳುವುದೂ ಇಲ್ಲ. ಇದು ಸಾಹಿತ್ಯ ಚರಿತ್ರೆಯ ಪುಟಗಳಲ್ಲಿ ನಿಜವಾಗಿರುವ ಸಂಗತಿ.

ಸಮಾಜವೆಂದರೆ ಅದೊಂದು ಜಡವಾದ ಘಟಕವಲ್ಲ. ಚಲನಶೀಲವಾದ ಸ್ಥಿತಿ.

ಇದರ ಹೊಕ್ಕಳುಬಳ್ಳಿಯಾದ ಸಂಸ್ಕೃತಿಯಂತೆ ಇದರ ಚಲನಶೀಲತೆ. ಹಲವು ಸಂಸ್ಕೃತಿಗಳ ಆಗರವಾದ ಸಮಾಜವನ್ನು ತೆರೆದುಕೊಳ್ಳಬೇಕಾಗಿರುವುದು ಹೀಗೆ. ತೆರೆದುಕೊಳ್ಳುವುದೆಂದರೆ ಹಲವು ವಿನ್ಯಾಸಗಳಿಂದ ರಚಿತವಾದ ಅದರ ಪದರಗಳನ್ನು ಬಿಡಿಸಿಕೊಳ್ಳುವುದು. ಇದನ್ನು ಹೀಗೂ ಹೇಳಬಹುದು: ಸಮಾಜದ ಅನಾವರಣವನ್ನು ಕಟ್ಟಿಕೊಡುವ ಕವಿ ಆ ಸಮಾಜದೊಳಗಣ ತಲ್ಲಣಗಳಿಗೆ ಕಿವಿಯಾಗುತ್ತಾನೆ; ಬಾಯಾಗುತ್ತಾನೆ. ದನಿ ತೆರೆಯುತ್ತಾನೆ. ಇಂಥ ಕವಿಯ ಕಿವಿ, ಬಾಯಿ ಮತ್ತು ದನಿಯಲ್ಲಿರುವ ಶಬ್ದ ಮತ್ತು ನಿಶಬ್ದಗಳನ್ನು ಕೇಳುವ ಮನೋಧರ್ಮವನ್ನು ಮೀಮಾಂಸಕಾರರು ಮೊದಲು ರೂಢಿಸಿಕೊಳ್ಳಬೇಕು. ಈ ಮಾತುಗಳನ್ನು ಹಿನ್ನೆಲೆಯಾಗಿರಿಸಿಕೊಂಡು ಕನಕದಾಸರ ಸಾಮಾಜಿಕ ಚಿಂತನೆಗಳನ್ನು ಅವಲೋಕಿಸುವ ಪ್ರಯತ್ನ ಈ ಮುಂದಿನದು.

ನಾನು ಆರಂಭದಲ್ಲೇ ಪ್ರಸ್ತಾಪಿಸಿದೆ – ಕನಕದಾಸರಲ್ಲಿ ಹಲವು ವ್ಯಕ್ತಿತ್ವಗಳಿವೆ ಎಂದು. ಈ ಒಂದೊಂದು ವ್ಯಕ್ತಿತ್ವಗಳ ರೂಪಣೆಯಲ್ಲಿಯೂ ವರ್ತಮಾನ, ಪರಿಸರ ಮತ್ತು ಪರಂಪರೆಯ ಒತ್ತಡ ಮತ್ತು ಪ್ರಭಾವಗಳಿರುತ್ತವೆ. ತಿಮ್ಮಪ್ಪನಿಂದ ಪ್ರಾರಂಭವಾದ ನಡೆಯಲ್ಲಿ ಅವರು ತಾಳಿಕೊಳ್ಳುವ, ಧರಿಸಿಕೊಳ್ಳುವ ಮತ್ತು ಏರುವ ಹಂತಗಳನ್ನು ನಾವು ನೋಡಬೇಕು. ತಾಳಿಕೊಳ್ಳುವುದೆಂದರೆ ತಾನಾಗೇ ಸಂಗತಿಗಳನ್ನು ಅವಲೋಕಿಸಿ ಸಮ್ಮತಿಸಿಕೊಳ್ಳುವುದು. ಧರಿಸುವುದೆಂದರೆ ಗ್ರಹಿಸಿ ಧಾರಣ ಮಾಡುವುದು. ಏರುವುದೆಂದರೆ ಶುದ್ಧ ಸಮಾಜದ ಚಹರೆಗಳನ್ನು ಬಿತ್ತುವ ಜಂಗಮ ಸ್ಥಿತಿಗೆ ತಲುಪುವುದು. ಇದರ ವಿವರಗಳನ್ನು ನಾನು ಮುಂದೆ ಪ್ರಸ್ತಾಪಿಸುತ್ತೇನೆ.

ಬಾಲ್ಯವನ್ನು ಮತ್ತು ತಾರುಣ್ಯವನ್ನು ಅನುಭವಿಸಿ ತರುವಾಯ ಬದುಕಿನ ನಷ್ಟವನ್ನು ಉಂಡ ಮೇಲೆ ಕನಕರಿಗೆ ಲೌಕಿಕದ ಇರಾದೆ ಇಲ್ಲವಾಗುತ್ತದೆ. ಈ ಲೌಕಿಕ ಇರಾದೆಯನ್ನು ತೊರೆಯುವುದೆಂದರೆ ತನ್ನ ಆಪ್ತೇಷ್ಟರನ್ನು ಕಳೆದುಕೊಂಡ ನೋವಿನ ಪರಿಣಾಮವೊಂದೇ ಅಲ್ಲ ಅದರ ಜೊತೆಗೇ ಧರೆಯನ್ನಾಳುವ ದೊರೆಯಿಂದ; ತಾವೇ ಶ್ರೇಷ್ಠವೆಂದುಕೊಂಡ ಕುಲಜರಿಂದ ಅನುಭವಿಸುವ ದಾಸ್ಯವನ್ನೇ ತೊರೆದು ದಾಸತ್ವಕ್ಕೆ ಏರುವುದು. ಇದಿದೆಯಲ್ಲ–ಲೌಕಿಕರ ಕೆಳಗೆ ದಾಸನಾಗಿರಬೇಕಾದ ದಾಸ್ಯ ಬದುಕು ಸಾಕೆಂದು ಲೋಕದೊಡೆಯನ ದಾಸನಾಗಬೇಕೆಂದು ತೀರ್ಮಾನಿಸುವುದು ಅಚ್ಚರಿಯ ಸಂಗತಿಯೇ! ಮನುಷ್ಯನೇ ಮನುಷ್ಯರನ್ನು ಗುಲಾಮಗಿರಿಗೆ ತಳ್ಳಿ ನಡೆಯುವ ನಡೆಯಿದೆಯಲ್ಲ ಅದು ಮನುಕುಲಭಂಗವೆಂದು ಕನಕದಾಸರು ಬಗೆಯುತ್ತಾರೆ. ತನ್ನ ವ್ಯಕ್ತಿತ್ವವನ್ನು, ತನ್ನ ಸಾಮರ್ಥ್ಯವನ್ನು, ತನ್ನ ಸ್ವಾತಂತ್ರ್ಯವನ್ನು, ತನ್ನ ಶ್ರಮವನ್ನು ಒಟ್ಟಿನಲ್ಲಿ ಬದುಕಿನ ಸಾರ್ಥಕತೆಯನ್ನು ಮಾನ್ಯ ಮಾಡದಿರುವ ಈ ಯಾವುದಕ್ಕೂ ದಾಸನಾಗದೆ, ಈ ಎಲ್ಲವುಗಳನ್ನು ಮೀರಿದ, ಎಲ್ಲದಕ್ಕೂ ಒಡೆಯನಾದ ಭಗವಂತನಿಗೆ ದಾಸನಾಗುವ ತೀರ್ಮಾನ ಅದು. ಈ ತೀರ್ಮಾನವನ್ನು ಸಫಲಗೊಳಿಸಲೆಂದು ಜ್ಞಾನಾರ್ಜನೆಯ



ದಾಹದಿಂದ ಹೊರಟಾಗ ಆ ಹೊತ್ತಿಗೆ ಪ್ರಭಾವಶಾಲಿಯಾಗಿದ್ದ ವೈಷ್ಣವ ಧರ್ಮಕ್ಕೆ ನಿಕಟಗೊಳ್ಳುತ್ತಾರೆ. ಅದರ ಪರಿಣಾಮ ಕರ್ಮಸಿದ್ಧಾಂತದ ಪ್ರತಿಪಾದನೆಯ ಧರ್ಮನಿಷ್ಠರಂತೆ ಕಾಣುತ್ತಾರೆ. ಇದು ಅವರ ಒಂದು ಮುಖ; ಕಾಲ ಧರ್ಮದ ಒತ್ತಡದ ಪಾಲುದಾರಿಕೆ. ಆದರೆ ಇದಕ್ಕಿಂತ ಪ್ರಧಾನವಾಗಿ, ಮನುಷ್ಯಸಮಾಜದ ಹಸನನ್ನು ಅರಸುತ್ತ ಹೊರಟ ಹಾದಿಯಲ್ಲಿ ಸಮಾಜಮುಖೀ ಕಾಳಜಿ, ಮಾನವೀಯ ತುಡಿತವನ್ನೇ ಮೂಲ ಮಾತೃಕೆಯಾಗಿರಿಸಿಕೊಂಡ ಬಗೆಯನ್ನು ನಾವು ಗ್ರಹಿಸಬೇಕು. ಭಕ್ತಮಾರ್ಗದಲ್ಲಿಯೇ ಸಮಾಜವನ್ನು ಕೈಗೆತ್ತಿಕೊಂಡು ವಿಶ್ಲೇಷಿಸುತ್ತ ಹೋಗುವುದು ಕನಕದಾಸರಿಗೆ ಮಾತ್ರ ಸಾಧ್ಯವಾಗುತ್ತದೆ. ಇದು ಅದುವರೆಗಿನ ದಾಸ್ಯದ ಅನುಭವದ ಪರಿಣಾಮ. ಹೀಗಾಗಿಯೇ ಅವರ ಬಯಲು ನಡೆಯಲ್ಲಿ ಲೋಕದೃಷ್ಟಿಯ ನಿಚ್ಚಳ ಚಹರೆಗಳು ಗೋಚರಿಸುವುದು. ಉದಾಹರಣೆಗೆ ಅವರ ಕೆಲವು ಕೀರ್ತನೆಗಳ ಮೂಲಕ ಈ ಚಹರೆಗಳನ್ನು ಒಮ್ಮೆ ಅವಲೋಕಿಸೋಣ: 'ತೊರೆದು ಜೀವಿಸಬಹುದೆ' ಎಂದು ಹಂಬಲಿಸಿದ ಭಕ್ತ; 'ದಾಸದಾಸರ ಮನೆಯ ದಾಸ ನಾನು' ಎಂದರ್ಪಿಸಿಕೊಂಡ ದಾಸ; 'ದೀನ ನಾನು ಸಮಸ್ತ ಲೋಕಕೆ ದಾನಿ ನೀನು' ಎಂಬ ಸಂತ; 'ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ' ಎಂಬ ದಾರ್ಶನಿಕ; 'ನಾನು ನೀನು ಎನ್ನದಿರೊ ಹೀನ ಮಾನವಾ ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡಲೊ' ಎಂಬ ವಿಮರ್ಶಕ; 'ತೀರ್ಥವನು ಪಿಡಿದವರೆಲ್ಲ ತಿರುನಾಮಧಾರಿಗಳೇ ಜನ್ಮ ಸಾರ್ಥಕವಿಲ್ಲದವರೆಲ್ಲ ಭಾಗವತರೆ' ಎಂಬ ಸಮಾಜ ಸುಧಾರಕ; 'ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನ್ನೇನಾದರು ಬಲ್ಲಿರಾ' ಎಂದು ಪ್ರತಿರೋಧಿಸಿದ ಕ್ರಾಂತಿಕಾರಿ ಮನೋಧರ್ಮಿ; 'ದ್ಯಾವಿ ನಮ್ಮ ದ್ಯಾವರು ಬಂದರು ಬನ್ನಿರೆ ನೋಡ ಬನ್ನಿರೆ' ಎಂಬುವ ಜನಪದ ಕಲಾಕಾರ; 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ' ಎಂಬ ತತ್ವಜ್ಞಾನಿ ಮುಂತಾಗಿ ವಾಗ್ಗೇಯಕಾರನಾಗಿ, ಕವಿಯಾಗಿ, ಕೃಷಿಕನಾಗಿ–ಹೀಗೆ ವಿಭಿನ್ನ ಸ್ತರಗಳಲ್ಲಿ ವ್ಯಕ್ತವಾಗುವ ಪರಿಯನ್ನು ಕಾಣಬಹುದು. ಈ ಎಲ್ಲ ವ್ಯಕ್ತಿತ್ವಗಳ ಅಭಿವ್ಯಕ್ತಿಯ ಮೂಲಬಿಂದು ಸಮಾಜವೇ ಆಗಿದೆ ಎಂಬುದನ್ನು ಮರೆಯಲಿಕ್ಕಾಗದು. ಆದರೆ ಕನಕದಾಸರಲ್ಲಿ ಹಲವು ಅಭಿವ್ಯಕ್ತಿಗಳಿವೆ; ಅವುಗಳ ಮೂಲ ಸೆಲೆಯಾದರೂ ಯಾವುದು? ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ನಮ್ಮ ಪಠ್ಯಪುಸ್ತಕಗಳಾಗಲೀ, ವಿಶ್ವವಿದ್ಯಾಲಯಗಳ ಮಾಸ್ತರುಗಳಾಗಲೀ ತಿಳಿಸಿಕೊಡಲಿಲ್ಲ. ಅಂದರೆ ಅದು ಕನಕದಾಸರಿಗೆ ಆದ ಅಪಚಾರವೆಂದೇನಲ್ಲ. ಬದಲಾಗಿ, ಅವರನ್ನು ಅರ್ಥ ಮಾಡಿಕೊಳ್ಳಬೇಕಾದ ದೇಸೀನೆಲೆಯ ನೋಟ–ನಿಲುವುಗಳ ಕಣ್ಣು ಮತ್ತು ಮನಸ್ಸುಗಳ ಕೊರತೆ ಎಂದುಕೊಳ್ಳಬೇಕು. ಯಾಕೆಂದರೆ ಕನಕದಾಸರು ಬರೀ ಶಿಷ್ಟ ಭಾಷೆಯಲ್ಲಿ ಮಾತನಾಡುವುದಿಲ್ಲ. ಅವರು ಅಡುಗೆ ಭಾಷೆಯಲ್ಲಿ, ಬೀದಿ ಭಾಷೆಯಲ್ಲಿ, ರೈತರ ಭಾಷೆಯಲ್ಲಿ, ಶ್ರಮಿಕರ ಭಾಷೆಯಲ್ಲಿ, ಜನಪದರ ಭಾಷೆಯಲ್ಲಿ ಮಾತನಾಡಿದರೂ

ಕನ್ನಡದ ಮೀಮಾಂಸೆಯ ಹಗೇವಿಗಿಳಿಯದೆ ಹೋದ ನಮ್ಮ ಸಾಹಿತ್ಯಚರಿತ್ರೆಕಾರರಿಗೆ ಇವು ಕೇಳಿಸಿದಂತಿಲ್ಲ. ವಿದ್ವಾಂಸರ ಲೋಕ ಒಂದು ರೀತಿ ಕತ್ತಲೆ ಕೋಣೆಯಲ್ಲಿ ಕೂತು ಬೆಳಕು ಸಿಗುತ್ತಿಲ್ಲ ಎಂದು ತಾವೇ ನಿರ್ಧಾರ ಮಾಡಿದಂತಿದೆ. ಇದಕ್ಕೇನು ನನ್ನ ಆಕ್ಷೇಪವಿಲ್ಲ. ಆದರೆ ನಾವು ಬದುಕುತ್ತಿರುವ ದಿನಮಾನದ ತುರ್ತು ಏನೆಂದರೆ – ನಮ್ಮ ವರ್ತಮಾನದ ಸಾಮಾಜಿಕ, ರಾಜಕೀಯ, ಆರ್ಥಿಕ ಪಲ್ಲಟಗಳ ಒತ್ತಡ, ನಿರೀಕ್ಷೆ ಮತ್ತು ನೋಟಗಳು ವಿಭಿನ್ನ ಬಗೆಯಲ್ಲಿರುವುದರಿಂದ ಈ ನೆಲೆಯಲ್ಲಿ ಕನಕರನ್ನು ಮರು ಓದಿಗೆ, ವ್ಯಾಖ್ಯಾನಕ್ಕೆ ಒಳಪಡಿಸುವ ಕೆಲಸ ಆಗಬೇಕೆಂಬುದು. ಇದು ಅಭಿಮಾನದ ಅಪೇಕ್ಷೆಯಲ್ಲ; ಕನಕದಾಸರಲ್ಲೇ ಇರುವ ಕಾವ್ಯ ತತ್ತ್ವ ಮತ್ತು ಸಾಮಾಜಿಕ ಸಮತತ್ತ್ವ. ಇದನ್ನು ಬೇಕಾದರೆ ಅವರ ಸಾಂಸ್ಕೃತಿಕ ಸಾಮರ್ಥ್ಯ ಎಂದೂ ಭಾವಿಸಬಹುದು. ಈ ಕುರಿತು ಈಗ ಅಲ್ಲಲ್ಲಿ ಚರ್ಚೆ ಪ್ರಾರಂಭವಾಗಿದೆ ಎಂಬುದು ದಿಟ. ಇದಕ್ಕೆ ಕಾಲದ ಒತ್ತಡವೂ ಕಾರಣವಿರಬಹುದು; ಇರಲಿ.

ನಾನಿಲ್ಲಿ ಮತ್ತೊಮ್ಮೆ ನೆನಪು ಮಾಡಿಕೊಳ್ಳಬೇಕೆಂದರೆ ನಾನು ಕನಕದಾಸರ ಲೋಕದೃಷ್ಟಿಯನ್ನು ಮೇಲಿನ ಪೀಠಿಕೆಯ ಹಿನ್ನೆಲೆಯಲ್ಲಿ ಟಿಪ್ಪಣಿಸುತ್ತಿದ್ದೇನೆ. ಲೋಕದೃಷ್ಟಿ ಎಂದರೆ ಇನ್ನೊಂದರ್ಥದಲ್ಲಿ ಅದು ಸಮಾಜ ದೃಷ್ಟಿಯೇ ಆಗಿದೆ. ಕನಕರ ಸಮಾಜದೃಷ್ಟಿಯು ನಮಗೆ ಮಹತ್ವವಾಗಿ ಕಾಣುವುದು ಅವರೇ ಆರ್ಜಿಸಿಕೊಂಡ ಶ್ರವಣ, ಮನನ ಮತ್ತು ಧ್ಯಾನಸ್ಥಿತಿಯ ನಡೆಯಿಂದ. ಅವರು ತರುಣದಿಂದಲೂ ಅಷ್ಟೆ ಅವರದು ಮುಕ್ತ ಮನಸ್ಸು; ಬಯಲ ಕನಸ್ಸು. ಕೇಳುವುದನ್ನು ಕೇಳುತ್ತಾರೆ; ನೋಡುವುದನ್ನು ನೋಡುತ್ತಾರೆ. ತರುವಾಯ ಅದನ್ನು ತ್ರಾಸಿಗಿಟ್ಟು ಮನನ ಮಾಡುತ್ತಾರೆ. ಆನಂತರವೇ ಧ್ಯಾನಸ್ಥಿತಿಗೆ ತಲುಪಿಸಿಕೊಳ್ಳುತ್ತಾರೆ. ಯಾವುದನ್ನೇ ಆಗಲಿ ಸ್ವೀಕರಿಸುವ ಮುನ್ನವೇ ತಿರಸ್ಕರಿಸುವ ಪ್ರವೃತ್ತಿ ಅವರಲ್ಲಿ ಕಾಣುವುದಿಲ್ಲ. ಆದ್ದರಿಂದ ಅವರು ಪೊರೆ ಕಳಚಿಕೊಳ್ಳುತ್ತ ಬೆಳೆದು ಧ್ಯಾನಸ್ಥಿತಿಗೆ ತಲಪುತ್ತ ದಾಸತ್ವಕ್ಕೇರುವುದು. ಧ್ಯಾನಸ್ಥಿತಿಗೆ ತಲುಪುವುದೆಂದರೆ ಅರ್ಥಾತ್ ದಾಸನಾಗುವುದು. ಅಂದರೆ ಮನುಷ್ಯತ್ವದ ಆತ್ಯಂತಿಕ ಸ್ಥಿತಿಗೇರುವುದು. ಇದನ್ನು ವಿವರಿಸಿಕೊಳ್ಳಲು ಅವರ 'ಹರಿಭಕ್ತಿಸಾರ' ಕಾವ್ಯದ 'ರಕ್ಷಿಸು ನಮ್ಮನನವರತ' ಎಂಬ ಪ್ರತಿಪಾದನೆಯನ್ನು ಉದಾಹರಣೆಗಾಗಿ ಗಮನಿಸಬಹುದು. ಭಕ್ತಿ ಕಾವ್ಯದ ಈ ನುಡಿಯನ್ನು ಭಕ್ತನೊಬ್ಬನ ಆತ್ಮದ ಮೊರೆ ಎಂದು ಗೆರೆ ಎಳೆಯಲು ಬರುವುದಿಲ್ಲ. ಹಲವು ಆಯಾಮಗಳಲ್ಲಿ ಬೆಳೆದ ಕವಿಯ 'ರಕ್ಷಿಸು ನಮ್ಮನನವರತ' ಎಂಬ ಕರೆ ದೇಹದ ಪ್ರೀತಿಯನ್ನು, ಸಮಾಜದೊಳಿತನ್ನು ಒಳಗೊಂಡಿದೆ. ನಶ್ವರವಲ್ಲದ, ಶಾಶ್ವತವಾದ, ಮಿತಿಗಳೇ ಇಲ್ಲದ, ಚಿರ ಒಡಲಿನ ನೆಲದ ಬಯಕೆ ಇದು. ಈ ಕರೆ ವ್ಯಕ್ತಿ ಘಟಕಕ್ಕೆ ಸಂಬಂಧಿಸಿದ ಸಾಂಸ್ಥಿಕ ಸ್ವರೂಪದ್ದಲ್ಲ; ಸಂವೇದನಾಶೀಲವಾದದ್ದು. ಈ ಕಾರಣದಿಂದಲೇ ಕನಕದಾಸರ ಈ ಪ್ರಾರ್ಥನೆ ವೈಯಕ್ತಿಕ ನೆಲೆಯಲ್ಲಿ ನಿಲ್ಲುವುದಿಲ್ಲ. 'ನಮ್ಮನ್ನು' ಎಂದು ಸಂಬೋಧಿಸುತ್ತಲೇ ಸಾರ್ವತ್ರಿಕಗೊಳಿಸುತ್ತಾರೆ. ಸಮಾಜದ ಮನುಷ್ಯರೆಲ್ಲರು ಒಗ್ಗೂಡಿ



ಸಮಾನತೆಯ ಬಾಳ್ವೆ ನಡೆಸಬೇಕೆಂಬ ಕನಸಿದೆಯಲ್ಲ ಅದು ನೆಲದ ಕಂಪನದಿಂದ ಮೂಡಿದ್ದು. ಈ ನಿಲುವಿಗೆ ಬರಬೇಕಾದರೆ ಅವರು ತಮ್ಮನ್ನು ಬಂಧಿಸಿಬಿಡಬಹುದಾಗಿದ್ದ ಎರಡು 'ತನ'ಗಳನ್ನು ಜಂಗಮನೆಡೆಯ ಪ್ರಾರಂಭದಲ್ಲೇ ನಿಗ್ರಹಿಸಿಕೊಳ್ಳುತ್ತಾರೆ. ಇದು ಅತ್ಯಂತ ಮುಖ್ಯವಾದ ಸಂಗತಿ. ಅದೆಂದರೆ ಒಂದು 'ಅಹಂ'; ಇನ್ನೊಂದು 'ಕುಲಂ'. ಜೀವಮೌಲ್ಯಕ್ಕೆ ಬೆಲೆಕೊಡದ ಮನುಷ್ಯ ಸಮಾಜದ ಮಾನವೀಯ ಮೌಲ್ಯದ ದೊಡ್ಡ ಕಳಂಕಗಳಾದ ಅಹಂಕಾರ ಮತ್ತು ಕುಲ–ಜಾತಿಗಳು ಇವು. ಇವುಗಳ ಅಪಾಯವನ್ನು ಅರಿತ ಅವರು ಮೊದಲು ಇವುಗಳನ್ನು ನಿರಸನಗೊಳಿಸಿಕೊಳ್ಳುವುದರ ಮೂಲಕ ಅವರು ಮನುಷ್ಯತ್ವದ ಮೌಲ್ಯಕ್ಕೆ ಸಾಕ್ಷಿಯಾಗುತ್ತಾರೆ.

ಈ ಕಾರಣಕ್ಕೆ ಕನಕದಾಸರ ಸಮಾಜದೃಷ್ಟಿ ತುಂಬ ವಿಶಾಲವೂ ವಿಶಿಷ್ಟವೂ ಆದುದು. ೧೬ನೆಯ ಶತಮಾನದಲ್ಲಿ ಆಗಿ ಹೋದ ಈ ಸಂತಕವಿಯ ಸ್ಪಂದನ ಇವತ್ತಿಗೂ ಅದೇ ತರಂಗದೊಂದಿಗೆ ಅಥವಾ ಇನ್ನೂ ತೀವ್ರವಾಗಿ ನಮ್ಮನ್ನು ಎಚ್ಚರಿಸುತ್ತಿದೆ ಎಂಬುದರಲ್ಲಿ ಅವರ ಲೋಕದರಿವಿನ ಹಿರಿಮೆಯಿದೆ. ಕನಕದಾಸರು ವಿನ್ಯಾಸಿಸಿಕೊಂಡ ಈ ಬಗೆಯ ಲೋಕದೃಷ್ಟಿಯನ್ನು ಮೂರು ಆಯಾಮಗಳಲ್ಲಿ ನಾವು ಅವಲೋಕಿಸಬೇಕಾಗಿದೆ. ಒಂದು – ಅವರು ತಾತ್ವಿಕ ಚರಿತ್ರೆಯನ್ನು ವ್ಯಾಖ್ಯಾನಿಸಿಕೊಳ್ಳುವುದು. ಎರಡು–ಸಮಕಾಲೀನ ಸಮಾಜದ ಸನ್ನಿವೇಶವನ್ನು ಗ್ರಹಿಸುವುದು. ಮೂರು – ಸಮಾಜದ ನಾಳೆಯ ಕನಸನ್ನು ಕಟ್ಟಿಕೊಳ್ಳುವ ಬಗೆಯನ್ನು ಅರ್ಥೈಸಿಕೊಳ್ಳುವುದು. ಈ ಪ್ರಕ್ರಿಯೆಗಳನ್ನು ಕನಕರು ಹೇಗೆ ನಿರೂಪಿಸಿಕೊಂಡರು ಎಂಬುದನ್ನು ಗಮನಿಸೋಣ.

ಕನಕದಾಸರು ಕುಲದ ಪ್ರಶ್ನೆಯನ್ನು ಎತ್ತಿಕೊಂಡ ಕೀರ್ತನೆಯೊಂದರಲ್ಲಿ **'ಆತ್ಮ ಯಾವ ಕುಲ ಜೀವ ಯಾವ ಕುಲ ತತ್ವೇಂದ್ರಿಯಗಳ ಕುಲ ಪೇಳಿರಯ್ಯ'** ಎಂದು ಕೇಳುತ್ತಾರೆ. ಮನುಷ್ಯನ ಅಸ್ತಿತ್ವದ ಆದಿಮಮೂಲದ ಕಡೆಗೆ ಈ ಪ್ರಶ್ನೆ ಚಾಚುತ್ತದೆ. ಅವರಿಗೆ ಗೊತ್ತಿದೆ: ಆದಿಮ ಸಮುದಾಯದ ಚರಿತ್ರೆ ಇದ್ದೂ ಇಲ್ಲದಂತಾಗಿದೆ ಅಥವಾ ಅಸ್ಪಷ್ಟವಾಗಿದೆ. ಈ ಸಮುದಾಯಕ್ಕೆ ತಮ್ಮ ಚರಿತ್ರೆಯ ಬಗೆಗಿನ ಅರಿವೂ ಅಷ್ಟಕಷ್ಟೆ. ತಮ್ಮ ಚರಿತ್ರೆಯನ್ನು ಪುನರ್‌ನಿರ್ಮಾಣ ಮಾಡುವ ರಾಜಕೀಯ ಇಚ್ಛಾಶಕ್ತಿಯೂ ಇವರಿಗಿಲ್ಲ. ಧರ್ಮ–ಜಾತಿ ಆಧಾರದ ಮೇಲೆ ಕಟ್ಟುತ್ತಾ ಬಂದಿರುವ ಚರಿತ್ರೆ ಪರಿಪೂರ್ಣವಲ್ಲ ಮತ್ತು ಅದರ ವಿಧಾನವೇ ಅಸ್ಮಿತೆಯಿಲ್ಲದ ತೇಪೆ ಸ್ವರೂಪದ್ದು. ಅದಕ್ಕೆ ಅವರು ಚರಿತ್ರೆಯನ್ನು ಭಾಷೆ ಮತ್ತು ಸಂಸ್ಕೃತಿಯ ಮೂಲಕ ಪುನರ್ ನಿರ್ಮಿಸಿಬೇಕಿರುವ ಅಗತ್ಯವನ್ನು ಪ್ರತಿಪಾದಿಸುತ್ತಾರೆ. ಯಾಕೆಂದರೆ ಈ ಆದಿಮ ಸಮುದಾಯ ಘನವಾಗಿ ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಸಾಧ್ಯವಾಗಿರುವುದೇ ಈ ತನ್ನ ಭಾಷೆ ಮತ್ತು ಸಂಸ್ಕೃತಿಯ ಮೂಲಕ ಎಂಬುದು ಅವರ ನಂಬುಗೆ. ಇದನ್ನು ತನ್ನ ಕಾವ್ಯ ದರ್ಶನದ ಮುಖಾಂತರ ಸೂಚಿಸುತ್ತಾರೆ.

ಎರಡನೆಯ ವಿಚಾರವಾದ ಸಮಕಾಲೀನ ಸನ್ನಿವೇಶವನ್ನು ಗ್ರಹಿಸುವ ಕ್ರಮ. ಎಲ್ಲವನ್ನೂ ತೊರೆದು ತಂಬೂರಿ ಹಿಡಿದು ಭಾಗವತರಾಗಲು ಬಯಸಿ ಹೊರಡುತ್ತಾರೆಂಬುದನ್ನು ಹಿಂದೆ ಪ್ರಸ್ತಾಪಿಸಿದೆಯಷ್ಟೆ. ಆದರೆ ಒಕ್ಕೂಟದ ಭಾಗವತರು ಇವರನ್ನು ಒಳಕ್ಕೆ ಬಿಟ್ಟುಕೊಳ್ಳುವುದಿಲ್ಲ. ಹೀಗಾಗಿ ಭಾಗವತರಿಂದ ಪಡೆಯಲಾಗದ ಸಮಾನಗೌರವ, ನೋವು ಸಂಕಟಗಳು ಅವರವು. ಆದ ಕಾರಣ ಅವರು ಒಳಗೂ ಒಂಟಿಯಾಗುತ್ತಾರೆ; ಹೊರಗೂ ಒಂಟಿಯಾಗುತ್ತಾರೆ. ವಿಶೇಷವೆಂದರೆ ಈ ಬಗೆಯ ಒಂಟಿತನವನ್ನು ಅವರು ನಿಭಾಯಿಸಿಕೊಂಡ ಮಾರ್ಗ. ಈ ಒಂಟಿತನ ಹಿಂಜರಿಕೆ ಅಥವಾ ಪಲಾಯನವಲಯದತ್ತ ಜಾರುವುದಲ್ಲ; ಬದಲು ಆತ್ಮಬಲ ತುಂಬಿಕೊಡುತ್ತದೆ. ಈ ಆತ್ಮಬಲವೇ ಕನಕರು ಪ್ರತ್ಯಕ್ಷಿಸಿಕೊಂಡ ಆದಿಕೇಶವ. ತನ್ನ ಭಕ್ತಿಯನ್ನು ಅರ್ಪಿಸಿಕೊಳ್ಳಲು ಬೇಕಾದ ಭಗವಂತನ ಆಕೃತಿಯಷ್ಟೇ ಆದಿಕೇಶವನಾಗುವುದಿಲ್ಲ. ಬಡವನ ಬದುಕಿನ ಬಲವೇ ಅವನ ದುಡಿಮೆಯಾಗಿರುವಂತೆ ಅವರಿಗೆ ಆದಿಕೇಶವನೇ ಆತ್ಮಬಲವಾಗಿ ಪರಿಣಮಿಸಿರುವುದನ್ನು ಕಾಣಬಹುದು. ಅವರ ನಡೆ ಮತ್ತು ನುಡಿಯಲ್ಲಿ ಆದಿಕೇಶವನೇ ಅನುರಣನಗೊಳ್ಳುತ್ತಾನೆ. ಸ್ಪಷ್ಟ ಅಂದರೆ ಆದಿಕೇಶವ ಕನಕದಾಸರಿಗೆ ಆತ್ಮಸಾಕ್ಷಿ.

ಆ ಆತ್ಮಸಾಕ್ಷಿಯೇ ಅವರ ನಿರ್ಭಿಡೆ ಅಭಿವ್ಯಕ್ತಿಯ ಮೂಲಸೆಲೆ. ಘೋಷಣೆ ರಹಿತವಾದ ಸ್ವಬಂಡಾಯದ ಆತ್ಮಶೋಧ. ಈ ಶೋಧ ಎಲ್ಲಿಯೂ ಸ್ವೈತ ಸ್ವಹಿತವಾದುದಲ್ಲ; ಲೋಕಮುಖಿಯಾದದ್ದು. ಆದ್ದರಿಂದಲೇ ಈ ಶೋಧದ ಹಾದಿಯಲ್ಲಿ ಅವರು ಮೌನಪಥಿಕರಲ್ಲ. ಪ್ರತಿಕ್ರಿಯಾತ್ಮಕ ಶೋಧಕ.

**ಕುಲಕುಲವೆಂದು ಹೊಡೆದಾಡದಿರಿ**
**ನಿಮ್ಮ ಕುಲದ ನೆಲೆಯನ್ನೇದರೂ ಬಲ್ಲಿರಾ?**

– ಎಂದು ಕೇಳುವ ಪ್ರಶ್ನೆ ಇವತ್ತಿಗೂ ಅಷ್ಟೆ ಹರಿತವಾಗಿ ಪ್ರತಿಫಲನಗೊಳ್ಳುತ್ತದೆ.

ಈ ಪ್ರಶ್ನೆ ಕೇವಲ ಕನಕದಾಸರ ವೈಯಕ್ತಿಕ ಪ್ರಶ್ನೆಯಲ್ಲ. ಅಲಕ್ಷ್ಯಕ್ಕೊಳಗಾದ ಸಮೂಹದ ಪ್ರಶ್ನೆ. ಪರಂಪರಾಗತವಾಗಿ ಬಂದ ಅಸಮಾನತೆ, ಅಹಂಕಾರ, ಡಾಂಬಿಕತನಗಳಿಗೆ ಪ್ರತಿರೋಧ ಒಡ್ಡಿದ ಬಗೆ. ಕನಕದಾಸರ ಸನ್ನಿವೇಶಗಳ ಈ ಬಗೆಯ ಗ್ರಹಿಕೆ ಇದೆಯಲ್ಲ ಅದು ತಳಸಮುದಾಯದ ಅಸಹಾಯಕತೆಯ ದನಿಯೂ ಹೌದು; ಸಂಘರ್ಷಮುಖಿಯಾದ ಭಾವವೂ ಹೌದು. ಹೀಗೆ ಸಮುದಾಯ ಚರಿತ್ರೆಗೆ ಬೇಕಾದ ಆತ್ಮಾಭಿಮಾನದ ಬಗೆಯನ್ನು ವಿವರಿಸಿಕೊಡುವ ಮೂಲಕ ವರ್ತಮಾನದ ಸಂಕಟಗಳನ್ನು ಎದುರಿಸುವ ಬಗೆಯನ್ನು ಮನಗಾಣಿಸುತ್ತಾರೆ.

ಕನಕರ ಲೋಕದೃಷ್ಟಿಯಲ್ಲಿ ಒಳಗೊಳ್ಳುವ ಮತ್ತೊಂದು ಮುಖ್ಯ ಸಂಗತಿ ಅಂದರೆ ಅವರು ಸಮಾಜದ ನಾಳಿನ ಕನಸನ್ನು ಕಟ್ಟಿಕೊಳ್ಳುವ ಬಗೆಯನ್ನು ಅರ್ಥೈಸಿಕೊಟ್ಟಿದ್ದು.

ಕನಕರು ಯೋಧತ್ವವನ್ನು ಬಿಟ್ಟು ದಾಸತ್ವವನ್ನು ಸ್ವೀಕರಿಸಿದರೂ ಅವರೊಳಗಿನ ಕವಿ ಸಮಾಜ ಮುಖಿಯಾಗಿಯೇ ತಲ್ಲಣಿಸುತ್ತಿರುತ್ತಾನೆ. ಅವರ ನಾಲ್ಕು ಕಾವ್ಯಗಳಲ್ಲಿ ಮತ್ತು ಕೀರ್ತನೆಗಳಲ್ಲಿ ವ್ಯಕ್ತವಾಗುವ 'ಭಕ್ತಿ' ಸಂಚಾರಿಯಾದರೂ ಮನುಷ್ಯ ಸಮಾಜದ ಕಾಳಜಿ ಸ್ಥಾಯಿಯಾಗಿಯೇ ಕೆಲಸ ಮಾಡುತ್ತದೆ. ಅದೇ ಕವಿಯ ತಲ್ಲಣಗಳಿಗೆ ಮೂಲ. ಕುಲವನ್ನು ಅವರು ನಿರಸನ ಮಾಡಿಕೊಂಡರೂ ಕುಲವೇ ಅವರಿಗೆ ಕಾಲ್ತೊಡಕಾಗಿದೆ ಅಥವಾ ಹೆಜ್ಜೆ ಹೆಜ್ಜೆಗೂ ಹೋದ ಕಡೆ ಶ್ರೇಷ್ಠರೆಂದುಕೊಂಡವರು ತೊಡಕುಗಳನ್ನು ಒಡ್ಡುತ್ತಾರೆ ಎಂಬ ಅಂಶಗಳನ್ನು ಹಿಂದಿನ ಮಾತುಗಳಲ್ಲಿ ಕಂಡುಕೊಂಡಿದ್ದೇವೆ. ಅದನ್ನು ಅವರು ನಿರ್ವಚಿಸಿಕೊಳ್ಳುವ ರೀತಿಯಂತು ಗಮನಾರ್ಹ. ಅವರು ಎಲ್ಲಿಗೇ ಹೋಗಲಿ ಒಳಗೆ ಪ್ರವೇಶ ಸಿಗುವುದಿಲ್ಲ; ಹೊರಗಡೆಯೇ ನಿಲ್ಲಿಸಲ್ಪಡುತ್ತಾರೆ. ಅದಕ್ಕೆ ಅವರು ಕೇರು ಮಾಡುವುದಿಲ್ಲ. **ಸತ್ಯವಂತರ ಸಂಗವಿರಲು ತೀರ್ಥವ್ಯಾತಕೆ ನಿತ್ಯ ಜ್ಞಾನಿಯಾದ ಮೇಲೆ ಚಿಂತೆಯಾತಕೆ॥** ಎಂದು ಕುಟಿಲ ಜನರಿಗೆ ನೇರವಾಗಿ ಕೇಳುತ್ತಾ ಹೋಗುತ್ತಾರೆ. ತನ್ನ ಹಿಂದಿರುವ ಸಮುದಾಯಕ್ಕೆ ಆತ್ಮಸ್ಥೈರ್ಯ ತುಂಬುವ ಅಗತ್ಯವನ್ನು ಅವರು ಕಂಡುಕೊಂಡಿದ್ದಾರೆ. ಅದಕ್ಕಾಗಿ ಹರಿ ಸಂಕೀರ್ತನೆಗಷ್ಟೆ ಸೀಮಿತವಾಗಿಬಿಡಬಹುದಾಗಿದ್ದ ಸರಳ ಮಾರ್ಗ ಬಿಟ್ಟು, ಸಂಕಟ–ಸಂಕೀರ್ಣ ಮಾರ್ಗವನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ. ಭಕ್ತಿಯ ಪರಾಕಾಷ್ಠೆ ಎಂದು ಬಗೆಯುವ ಈ ಕೀರ್ತನೆಯ ಸಾಲನ್ನು ಗಮನಿಸಿ: **'ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ । ಕೂಗಿದರೂ ದನಿ ಕೇಳಲಿಲ್ಲವೆ ನರಹರಿಯೆ'** ಎಂಬುದು. ನಮ್ಮ ಗ್ರಾಮೀಣ ಸೀಮೆಯಲ್ಲಿ 'ನರ ಹರಿಯೊ ಹಂಗೆ ಕೂಗಿದ್ರೂ ಕೇಳಿಸಿಕೊಳ್ತಾ ಇಲ್ಲವಲ್ಲಪ್ಪ' ಎಂಬ ಮಾತಿದೆ. ಕನಕರ ಕವಿ ತನ್ನ ನರಹರಿಗೆ ಕೇಳುತ್ತಾರೆ: ನರ ಹರಿದು ಹೋಗುವಂತೆ ಸಮುದಾಯವೊಂದು ಕರೆಯುತ್ತಿದೆ ನೀನು ಏನು ಮಾಡುತಿದ್ದೀಯೆ? ಎಲ್ಲಿದ್ದೀಯೆ? ಎಂದು. 'ನರ ಹರಿಯುವಷ್ಟು' ಎಂದು ಅರ್ಥೈಸಿಕೊಳ್ಳಲು ಇರುವ ಅವಕಾಶಕ್ಕೆ ಬಿದ್ದಿರುವ ಒತ್ತಿದೆಯಲ್ಲ ಅದು ಇಲ್ಲಿ ಮುನ್ನೆಲೆಗೆ ನಿಲ್ಲುವ ಸಂಗತಿ. ಅಂದರೆ ನಿರಂತರ ಅವಗಣನೆಗೆ ಒಳಗಾದ ಅಸಹಾಯಕ ಜನವರ್ಗವು ದನಿ ಎತ್ತಬೇಕಾದ ಅಗತ್ಯವನ್ನು ಕವಿಹೃದಯ ಆಗ್ರಹಿಸುತ್ತದೆ. ಸಮಾಜದಲ್ಲಿರುವ ಅಸಹಾಯಕವಾದ ಈ ದೊಡ್ಡ ಸಮುದಾಯಕ್ಕೆ ಮಾನ್ಯತೆ ಸಿಗಬೇಕು; ಅವರಿಗಿರುವ ಶಕ್ತಿಯನ್ನು ಗುರುತಿಸಿ ಆತ್ಮವಿಶ್ವಾಸ ತುಂಬಬೇಕು ಎಂಬ ಮುನ್ನೆಲೆಯ ಕನಸು ಕನಕದಾಸರದು.

ಈ ಆಶಯವನ್ನು ಅವರ ರಾಮಧಾನ್ಯಚರಿತ್ರೆಯ ಬತ್ತ–ರಾಗಿಯ ಪ್ರಸಂಗದಿಂದ ಮತ್ತಷ್ಟು ಗ್ರಹಿಸಿಕೊಳ್ಳಬಹುದು. ಹಾಗೆ ನೋಡಿದರೆ ಅವರ ಸಾಮಾಜಿಕ ತಲ್ಲಣಕ್ಕೆ ಈ ಕಾವ್ಯ ಮೈದಾಳಿದಂತಿದೆ. ಇದೊಂದು ಕನಕದಾಸಕವಿಯ ವಿಶೇಷ ಮತ್ತು ವಿನೂತನ ಕೊಡುಗೆಯೇ ಆಗಿದೆ. ಈ ಕಾವ್ಯದಲ್ಲಿ ನಡೆಯುವುದು ಮೇಲ್ನೋಟಕ್ಕೆ ಕಾಣುವಂತೆ, ಬತ್ತ ರಾಗಿಯ ಜಗಳವಲ್ಲ. ಶತಮಾನದಿಂದ ಸಾಗಿ ಬಂದ ಜಾತಿ, ವರ್ಗ, ವರ್ಣ ಸಂಘರ್ಷಗಳ ಚರಿತ್ರೆಯ ಒಂದು ಮಾದರಿ. ಆ ರಾಮಧಾನ್ಯಚರಿತ್ರೆಯ ಕಾವ್ಯವನ್ನು

ಇಲ್ಲಿ ವಿವರಿಸಲು ನಾನು ಹೋಗುವುದಿಲ್ಲ. ಆದರೆ ನನ್ನ ಮಾತಿಗೆ ಪೂರಕವಾದ ಈ ಪ್ರಸಂಗವನ್ನು ಉಲ್ಲೇಖಿಸುತ್ತೇನೆ: ಗೌತಮ ಮುನಿಯ ಆಶ್ರಮದಲ್ಲಿ ಧಾನ್ಯಗಳಿಂದ ಸಿದ್ಧಪಡಿಸಿದ್ದ ಭಕ್ಷ್ಯ ಭೋಜ್ಯಗಳನ್ನು ಸವಿದು ವಿಶ್ರಾಂತಿಗೆ ಕೂತಾಗ ಶ್ರೀರಾಮಚಂದ್ರ ಹನುಮಂತನಿಗೆ ತಿನಿಸುಗಳನ್ನು ತಯಾರಿಸಿದ ಧಾನ್ಯಗಳ ಬಗ್ಗೆ "ಇವರ ರುಚಿ ಎಂತೆನಲು" ಎಂದು ಬೆಸೆಗೊಳ್ಳುತ್ತಾನೆ. ಅಂದರೆ ಈ ಧಾನ್ಯಗಳಲ್ಲಿ ಹೆಚ್ಚು ರುಚಿ ಇರುವುದು ಯಾವುದು ಎಂಬುದು. ಅದಕ್ಕೆ ಹನುಮಂತ ವಿನೀತ ಭಾವದಲ್ಲಿ ಪ್ರಭುಗೆ, ರುಚಿಯಲ್ಲ "ಧಾನ್ಯದ ತನುವನೀಕ್ಷಿಸಬೇಕು" ಎಂದು ಹೇಳುತ್ತಾನೆ. ಶುಚಿ, ರುಚಿಯನ್ನು ದಾಳವಾಗಿಸಿಕೊಂಡು ಬಹುಸಂಖ್ಯಾತ ಶ್ರಮಿಕರ ಬೆವರಿಗೆ ಬೆಲೆ ನೀಡದಿದ್ದ ಪರಂಪರೆಯನ್ನು ಮುರಿಯುವ ಕವಿಯ ಕಾವ್ಯ ಚಮತ್ಕಾರ ಇಲ್ಲಿದೆ. ಇದು ಏನು ಹೇಳುತ್ತದೆಂದರೆ – ನಾವು ಕಣ್ತೆರೆದು ನೋಡಬೇಕಿರುವುದು ನಾಲಿಗೆ ಮೇಲಾಡುವ ರುಚಿಯನ್ನಲ್ಲ; ಆ ರುಚಿಯನ್ನು ಉತ್ಪಾದಿಸುವ ಶಕ್ತಿ ಮೂಲದ ತನುವನ್ನು ಎಂಬ ವಿವೇಕವನ್ನು ಮನಗಾಣಿಸುತ್ತಿದೆ. "ಮಣ್ಣಿನಲ್ಲಿ ಹುಟ್ಟಿದ ದೇಹವ ಮಣ್ಣುಗೂಡಿಸಬೇಡ ಜ್ಞಾನದ ಕಣ್ಣ ದೃಷ್ಟಿಯನ್ನಿಟ್ಟು ರಕ್ಷಿಸು" ಎನ್ನುವ ಕನಕದಾಸರ ಒತ್ತು ನಿಸರ್ಗ ವಿವೇಕದ ಕಡೆಗಿದೆ. ಇದು ಸಮಸಮಾಜದ ಅಂತಿಮ ಸತ್ಯ. ಮನುಕುಲದ ಕ್ರಿಯಾಶಕ್ತಿಯನ್ನು ದುಡಿಯುವ ಕೈಗಳಿಗೆ ತುಂಬಬೇಕಿರುವ ವಿವೇಕವನ್ನು ಕನಕರು ಬಹು ಮಾರ್ಮಿಕವಾಗಿ ತಿಳಿಸುತ್ತಾರೆ.

ಹೀಗೆಯೇ ಕನಕದಾಸರು ನಿರ್ವಹಿಸಿರುವ ಇನ್ನೊಂದು ಪ್ರಸಂಗವನ್ನು ಗಮನಿಸಿ. ಈ ರಾಗಿ ಬತ್ತಗಳ ವಾದವಿವಾದ ಆಲಿಸಿದ ಮೇಲೆ ಶ್ರೀರಾಮಚಂದ್ರ ಯಾರು ಶ್ರೇಷ್ಠ ಎಂದು ತೀರ್ಮಾನ ಹೇಳುವ ಸಂದರ್ಭ ಬರುತ್ತದೆ. ಆದರೆ ಇಲ್ಲಿ ಕನಕರು ಏಕಾಏಕಿ ಅವನಿಂದ ತೀರ್ಪು ಕೊಡಿಸುವುದಿಲ್ಲ. ಬದಲಿಗೆ 'ತರ್ಕಗಳು ಸಾಕು. ನಿಮಗಿರುವ ಸಾಮರ್ಥ್ಯವನ್ನು ನೀವೇ ಸಾಬೀತುಪಡಿಸಿ' ಎಂದು ತಿಳಿಸಿ ಎರಡೂ ಧಾನ್ಯಗಳನ್ನು ಸೆರೆಮನೆಯಲ್ಲಿರಿಸುತ್ತಾನೆ. ಆರು ತಿಂಗಳ ನಂತರ ಅವನ್ನು ಹೊರತಂದು ನೋಡಿದಾಗ ಗಟ್ಟಿ ಯಾರು ಜೊಳ್ಳು ಯಾರು ಎಂದು ಗೊತ್ತಾಗುತ್ತದೆ. ರಾಗಿ ಶಕ್ತವಾಗಿರುತ್ತದೆ. ಬತ್ತ ಜೊಳ್ಳಾಗಿ ಹೋಗಿರುತ್ತದೆ. ಈ ಪ್ರಸಂಗದ ಸಂಗತವೆಂದರೆ ಸಮರ್ಥರಿಗೆ, ಸತ್ವವುಳ್ಳವರಿಗೆ ತಮ್ಮ ಶಕ್ತಿ ಪ್ರದರ್ಶಿಸಲು ಇನ್ನೊಬ್ಬರ ಊರುಗೋಲು ಬೇಡ, ಅವರಿಗೆ ಬೇಕಾಗಿರುವುದು ಅವಕಾಶ. ಆಗ ಅವರು ಸಮಾಜದಲ್ಲಿ ಆತ್ಮಾಭಿಮಾನದಿಂದ ಸಮಾನವಾಗಿ ಬದುಕಬಲ್ಲರು ಎಂಬುದು ಇಲ್ಲಿನ ಲೋಕಾರ್ಥ. ಅಂದರೆ ಪ್ರಭುವಾದ ಶ್ರೀರಾಮಚಂದ್ರ ತಾನು ತೀರ್ಪು ನೀಡದೆ, ಈ ಧಾನ್ಯಗಳು ತಮ್ಮ ಅರ್ಹತೆಯನ್ನು ತಾವೇ ಜಾಹೀರುಗೊಳಿಸಿ ತಾವೇ ತೀರ್ಪು ನೀಡಿಕೊಳ್ಳುವ ಪ್ರಸಂಗ ಏರ್ಪಡಿಸುವುದು ಕನಕದಾಸರ ಸಾಮಾಜಿಕ ನ್ಯಾಯಕ್ಕೆ, ಶ್ರಮ ಕಾಯಕ ಧರ್ಮಕ್ಕೆ ಅದ್ಭುತ ನಿದರ್ಶನವಾಗುತ್ತದೆ. ಪ್ರಭುವಿನ ಕೈಯಲ್ಲಿದ್ದ ನ್ಯಾಯದಂಡವನ್ನು ಮೂಲೆಗೆ ತಳ್ಳಲ್ಪಟ್ಟ



ಪ್ರಜೆಯ ಕೈಗೆ ನೀಡಿಸುವ ಕ್ರಿಯೆ ಬಹು ಅರ್ಥಪೂರ್ಣವಾಗಿದೆ. ಈ ನಿಸರ್ಗ ವಿವೇಕವನ್ನು ಕನಕದಾಸರು ಎತ್ತಿ ಹಿಡಿದದ್ದು ಒಂದು ಅನನ್ಯ ಸಾಧನೆಯೂ ಅವರ ದೇಸೀ ನೆಲೆಯ ಮೂಲ ಮಾತೃಕೆಗೆ ಸೋದಾಹರಣ ನಿರೂಪಣೆಯೂ ಆಗಿದೆ.

ಒಟ್ಟಾರೆ ಕನಕದಾಸರು ಜಾತಿ ಮೂಲವಾದ ಸಮಾಜದಿಂದ ಅನುಭವಿಸಬೇಕಾಗಿ ಬಂದ ಅಪಮಾನ, ಅಗೌರವಗಳು ಕವಿಯನ್ನು ಸಕಾರಣವಾಗಿಯೇ ದುಡಿಸಿಕೊಂಡಿವೆ. ಕನಕರಲ್ಲಿ ಅನುಭವ ಮತ್ತು ಅಭಿವ್ಯಕ್ತಿ ಏಕೀಭವಿಸಿದ ಕಾರಣಕ್ಕೆ ಅವರ ಕಾವ್ಯ ಧ್ವನಿ ಸಶಕ್ತವಾಗಿದೆ. ಸಾಮಾಜಿಕ ತಲ್ಲಣ, ತಳಮಳಗಳ ಜೊತೆ ಮಾನವೀಯ ಮೌಲ್ಯಕ್ಕಾಗಿ ಪ್ರತಿಪಾದಿಸಿದ ರೀತಿ ಅನನ್ಯವಾಗಿದೆ.

ದಿಟ – ಕನಕದಾಸರು ಭಕ್ತ. ಆದರೆ ಅವರು ಆರಾಧಿಸುವ ಭಕ್ತಿಯು ಕೇವಲ ಪಾರಾಯಣಕ್ಕೆ ಸೀಮಿತವಾಗುವುದಿಲ್ಲ. ಜ್ಞಾನೋಪಾಸನೆಗೆ, ಸಮಾಜ ಸುಧಾರಣೆ ಕಡೆಗೆ ತೊಡಗುತ್ತದೆ. ಭಕ್ತಿಯನ್ನು ಸಾಮಾಜೀಕರಣಗೊಳಿಸಿದ್ದು ಕನಕದಾಸರ ವಿನೂತವಾದ ಬಹು ದೊಡ್ಡ ಕೊಡುಗೆ. ಕನಕದಾಸರ ಈ ಬಗೆಯ ಸಾಮಾಜೀಕರಣದ ತೀವ್ರತೆ ಹೇಗಿದೆ ಎಂದರೆ–

**ಕಾಲ ಕರ್ಮದೊಳುಪೇಕ್ಷೆಯ ಮಾಡಿ ಹರಿಭಕುತಿ**
**ಶೀಲ ರಹಿತ ಬ್ರಾಹ್ಮಣನಾಗಲೊಲ್ಲೆ**
**ಶೀಲ ಸಹಿತ ಹರಿಭಕುತಿ ಮಾಳ್ಪಪರ**
**ಚಾಂಡಾಲನ ಮನೆ ಬಾಗಿಲು ಕಾಯಿಸೆನ್ನ॥**

**ಕಾ.ತ.ಚಿಕ್ಕಣ್ಣ**

# ಕನಕದಾಸ–ಕನ್ನಡ ವಿವೇಕದ ಮತ್ತೊಂದು ಅಭಿವ್ಯಕ್ತಿ

ಕನಕದಾಸರು ಕನ್ನಡದ ಸಂಸ್ಕೃತಿಯ ಸಂದರ್ಭದಲ್ಲಿ ಬಹಳ ಮುಖ್ಯವಾಗಿರುವ ಒಂದು ಕಾಲಘಟ್ಟದಲ್ಲಿ ಬದುಕಿದವರು ಮತ್ತು ಬರೆದವರು. ಅದನ್ನೀಗಾಗಲೇ ಹಲವು ಸಲ, ಹಲವು ಸಂದರ್ಭಗಳಲ್ಲಿ ಬಹಳ ಜನ ಹೇಳಿ ಆಗಿದೆ. ಆದರೆ ಅದರ ನಿಜವಾದ ನೆಲೆಗಟ್ಟು ಏನಾಗಿತ್ತು ಮತ್ತು ಆ ರೀತಿಯ ಪ್ರತಿಪಾದನೆಗೆ ಕನ್ನಡ ಜಗತ್ತು ಯಾವ ರೀತಿ ಸ್ಪಂದಿಸಿತು ಅನ್ನುವಂತಹ ವಿಷಯಗಳನ್ನು ಗಮನಿಸಬೇಕೆನಿಸುತ್ತದೆ.

ನಮ್ಮ ಕನ್ನಡದ ಸಾಂಸ್ಕೃತಿಕ ಜಗತ್ತು ಅಥವಾ ಅದರ ವಿವೇಕದ ಹಾದಿ ತನ್ನ ಪ್ರತಿಯೊಂದು ನಿರ್ಣಾಯಕ ಕಾಲಘಟ್ಟದಲ್ಲೂ ಒಬ್ಬೊಬ್ಬ ಯುಗ ನಿರ್ಮಾಪಕನನ್ನ ಅಥವಾ ಒಬ್ಬ ಪ್ರಾತಿನಿಧಿಕ ಸ್ವರೂಪಿ ವ್ಯಕ್ತಿತ್ವದವನನ್ನ ನಮ್ಮ ಮುಂದೆ ಇಟ್ಟುಹೋಗಿದೆ. ಅದೇ ರೀತಿ ಮುಂದೂ ಕೂಡ ಇನ್ನೂ ಹಲವು ಜನ ಬರಬಹುದು. ಈಗಾಗಲೇ ನಾವು ಗಮನಿಸಿರೋ ಹಾಗೆ ಕವಿರಾಜಮಾರ್ಗ ಆಗಿರಬಹುದು. ಪಂಪನ ವಿಕ್ರಮಾರ್ಜುನವಿಜಯ ಆಗಿರಬಹುದು ಅಥವಾ ಪಂಪ ಪ್ರತಿಪಾದಿಸಿದಂತಹ ನಿಲುವುಗಳಾಗಿರಬಹುದು. ಕನ್ನಡದ ಚಿಂತನೆಯನ್ನು ಬಹಳ ಪ್ರಖರವಾಗಿ ಸಾಂಸ್ಕೃತಿಕ ಲೋಕಕ್ಕೆ ಉಣಬಡಿಸಿದಂತಹ ವಚನಕಾರರು. ಕುಮಾರವ್ಯಾಸ, ಹರಿದಾಸರು, ಸರ್ವಜ್ಞ ಅಷ್ಟೆಯಾಕೆ ನಮ್ಮ ಕಾಲಘಟ್ಟದಲ್ಲಿ ಕಂಡಂಥ ಕುವೆಂಪು ಹೀಗೆ ಪ್ರತಿಯೊಂದು ಕಾಲಘಟ್ಟದಲ್ಲೂ ಕೂಡ ತನ್ನನ್ನ ತಾನು ಅಭಿವ್ಯಕ್ತಿಪಡಿಸಿಕೊಳ್ಳುವುದಕ್ಕೆ, ತನ್ನ ಚಲನಶೀಲತೆಯನ್ನ ತೋರ್ಪಡಿಸುವುದಕ್ಕೆ ಕನ್ನಡದ ವಿವೇಕ ಆಯ್ಕೆಮಾಡಿಕೊಂಡಿರುವಂತಹ ವ್ಯಕ್ತಿತ್ವಗಳಿವು. ಆದ್ದರಿಂದಲೇ ಬಹಳ ಸಲ ನಮ್ಮ ನಡುವೆ ಮತ್ತೆ ಮತ್ತೆ ಚರ್ಚೆಗೂ, ಅವಲೋಕನಕ್ಕೂ ಒಳಗಾಗುತ್ತಲೇ ಇದ್ದಾರೆ.

ಪ್ರಸ್ತುತ ಕನಕದಾಸರು ಅಂಥವರಲ್ಲಿ ಒಬ್ಬರು. ಅವರು ಧಾರ್ಮಿಕವಾದ ಮತ್ತು ಸಾಂಸ್ಕೃತಿಕವಾದ ಸೂಕ್ತ ಪ್ರಾತಿನಿಧ್ಯವಿಲ್ಲದಂತಹ ಸಾಮಾಜಿಕ ಪರಿಸರದಲ್ಲಿ ಹುಟ್ಟಿ ತಮ್ಮ ನಿಲುವನ್ನು ಸಮಾಜದ ಮುಂದಿಡುವುದಕ್ಕೋಸ್ಕರ ಸಾಹಿತ್ಯ ರಚನೆಗಿಳಿದರು. ಆದರೆ ರಾಜನ ಆಸ್ಥಾನದಲ್ಲಿ ವಾಚಿಸುವುದಕ್ಕೊ, ಪಂಡಿತರ ಬಳಕೆಗೊ ಅಥವಾ ಗಣ್ಯ ಸಮಾಜದ ಮನರಂಜನೆಗಾಗಿಯೊ ಕಾವ್ಯವನ್ನು ನಿರ್ಮಾಣ ಮಾಡಿ ಆ ಮುಖಾಂತರ ಪ್ರಸಿದ್ಧಿಯನ್ನು ಪಡೆದು ಮಹಾಕವಿ ಎನಿಸಿಕೊಳ್ಳುವ ಯಾವ ಇರಾದೆಗಳೂ ಕೂಡ ಕನಕದಾಸರಲ್ಲಿ ಇದ್ದಂತೆ ಕಾಣುವುದಿಲ್ಲ.



ಕನಕದಾಸರು ಸ್ವಯಂ ಇಷ್ಟಪಟ್ಟು ಎಷ್ಟರಮಟ್ಟಿಗೆ ಸಂತರಾದರೊ, ಅಷ್ಟೇ ಪ್ರಮಾಣದಲ್ಲಿ ಆ ಕಾಲಘಟ್ಟದಲ್ಲಿ ಬಂದಿರುವಂತಹ ಒತ್ತಾಸೆ ಕೂಡ ಅವರನ್ನು ಸಂತರನ್ನಾಗಿ ಬದಲಿಸುವುದಕ್ಕೆ ಕಾರಣವಾಗಿದೆ ಎಂದು ನನಗನ್ನಿಸುತ್ತಿದೆ. ಈ ಮಾತಿಗೆ ಬೆಂಬಲವಾಗಿ ಒಂಚೂರು ಹಿನ್ನೆಲೆಯನ್ನು ಹೇಳಿದರೆ ಅನುಕೂಲ ಆಗಬಹುದು. ೧೨ನೆಯ ಶತಮಾನದಲ್ಲಿ ಕರ್ನಾಟಕದಲ್ಲಿದ್ದಂತಹ ತಳಸ್ತರದ ಕುಶಲಕರ್ಮಿ ಸಮುದಾಯ ತಮ್ಮ ಮುನ್ನಡೆಯ ಆಶಯಗಳನ್ನು ವಚನ ಚಳುವಳಿಯ ಮುಖಾಂತರ ಪ್ರತಿಪಾದನೆ ಮಾಡಿತು. ಆನಂತರ ಎರಡು ಶತಮಾನಗಳ ನಂತರದಲ್ಲಿ ಬಂದಂತಹ ವಿದ್ಯಮಾನ ಹರಿದಾಸರ ರೂಪದಲ್ಲಿ, ಭಕ್ತಿಪಂಥದ ರೂಪದಲ್ಲಿ ತಮ್ಮ ಪ್ರತಿಪಾದನೆಯನ್ನು ಮುಂದಿಡುವಂತಹ ಒಂದು ಅವಕಾಶವನ್ನು ಒದಗಿಸಿಕೊಟ್ಟಿದೆ. ಅದರಲ್ಲಿ ಪ್ರಮುಖ ಧ್ವನಿ ಎಂದರೆ ಕನಕದಾಸರು.

ಕನಕರ ವೈರಾಗ್ಯ ಎಂಬುದು ಒಂದು ತಾರ್ಕಿಕವಾದ ಅಂತ್ಯ ಎನಿಸುತ್ತದೆ. ಎಲ್ಲಿ ಭೋಗಲಾಲಸೆ ಅಥವಾ ಅಧಿಕಾರ, ಹಣ ಮತ್ತು ಸಂಪತ್ತು ಬಹಳ ದೊಡ್ಡ ಪ್ರಾಮುಖ್ಯತೆಯನ್ನು ಪಡೆಯುತ್ತೋ ಅಂತಹ ಸಮಾಜದಲ್ಲಿ ಅದರ ಇನ್ನೊಂದು ತುದಿಯಾಗಿ ವಿರಕ್ತಿಯೂ ಹುಟ್ಟುತ್ತದೆ ಎಂಬುದನ್ನು ಕನಕದಾಸರ ಸಂದರ್ಭದಲ್ಲಿಯೂ ಗಮನಿಸಬಹುದು. ಹೆಣ್ಣನ್ನು, ಹಣವನ್ನು, ಅಧಿಕಾರವನ್ನು, ಶೌರ್ಯವನ್ನು ಬಹಳ ದೊಡ್ಡ ಸಾಧನಗಳು ಅಂತ ತಿಳಿದಿದ್ದಂತಹ ಸಮಾಜದಲ್ಲಿ, ಅದರ ಮತ್ತೊಂದು ತುದಿಯಾಗಿ ಕನಕದಾಸರಿಗೆ ಹುಟ್ಟಿರುವ ವೈರಾಗ್ಯ ಆ ಕಾಲಘಟ್ಟದ ಮತ್ತೊಂದು ತಾರ್ಕಿಕ ಅಂತ್ಯದ ಚಿಂತನೆಯನ್ನು ಅನಾವರಣಗೊಳಿಸುತ್ತದೆ.

* * *

ಕನಕದಾಸರಿಗೆ ಆ ಕಾಲದಲ್ಲಿ ಏನನ್ನು ಪ್ರತಿಪಾದನೆ ಮಾಡಬೇಕಾಗಿತ್ತು ಎಂದರೆ ಆವರೆಗೂ ಯಾರು ತುಂಬ ಕುಲಜರು ಅಂತ ಭಾವಿಸಿದ್ದರೋ, ಯಾರು ಶ್ರೇಷ್ಠ ಕುಲದವರು ಅಂತ ಭಾವಿಸಿದ್ದರೋ, ಅವರೆಲ್ಲರ ಪ್ರಾಬಲ್ಯಕ್ಕೆ ಅಥವಾ ಏಕಸ್ವಾಮ್ಯಕ್ಕೆ ಸವಾಲು ಎಸೆಯಬೇಕಾದ ಸಾಮಾಜಿಕ ಒತ್ತಡ ಇತ್ತು. ಆ ಸವಾಲಿನ ಎದುರಿನ ಪ್ರಾತಿನಿಧಿಕತ್ವದ ಸಂಕೇತವಾಗಿ ಕನಕದಾಸರು ನಮಗೆ ಕಾಣಸಿಗುತ್ತಾರೆ. ಹಾಗೆ ನೋಡಿದರೆ ಕನಕದಾಸರು ಸಹಜವಾಗಿ ಆ ಯುಗಧರ್ಮದ ವಾಣಿಯಾಗಿ ಮೂಡಿಬಂದರು. ಕುಲದ ಹಿರಿಮೆ ಅಂತ ಹೊಡೆದಾಡಬೇಕಾದುದಿಲ್ಲ ಅಂದರು. ಅವರ ಮಾತಿನ ಹಿನ್ನೆಲೆ ಸ್ಪಷ್ಟ. ನಿಮ್ಮ ಕುಲದ ನೆಲೆಯನ್ನ ನೀವು ಅರಿತಿಲ್ಲ ಆದ್ದರಿಂದ ಹುಸಿ ಹಿರಿಮೆ ಅದು–ಎನ್ನುವುದು ಅವರ ಮುಖ್ಯವಾದುದೊಂದು ಪ್ರಮೇಯ. ಕನಕದಾಸರನ್ನು ಮಾತ್ರವೇ ನಾವು ಯಾಕೆ ಮತ್ತೆ ಮತ್ತೆ ಉದಾಹರಿಸುತ್ತೀವಿ ಅಂದರೆ, ಅವರು ಪ್ರತಿಪಾದಿಸಿರುವ ನಿಲುವುಗಳಿಗೂ ಅವರು ಹುಟ್ಟಿ ಬಂದ ಹಿನ್ನೆಲೆಗೂ ಬಹಳ ತಾಳ ಮೇಳ ಇದೆ. ಅದನ್ನು ಬೇರೆ ಯಾರೋ ಹೇಳಿದರೆ ಅದು ಬರಿ ತೋರಿಕೆಯ

ಮಾತೂ ಆಗಿರಬಹುದಿತ್ತು. ಅದನ್ನ ಬೇರೆ ಯಾರೋ ಪ್ರತಿಪಾದನೆ ಮಾಡಿದರೆ ಅದು ಬರೀ ಆದರ್ಶದ ಮಾತಾಗಬಹುದಿತ್ತು.

ಕನಕದಾಸರ ವಿಷಯದಲ್ಲಿ ನಾವು ಗಮನಿಸಬೇಕಾದ ಮುಖ್ಯ ವಿಷಯ ಏನೆಂದರೆ, ಕೀಳು ಎಂದು ಕರೆಯಲ್ಪಟ್ಟ ಒಂದು ಕುಲದ ಹಿನ್ನೆಲೆಯಲ್ಲಿ ಹುಟ್ಟಿ, ಆ ಕಾಲಘಟ್ಟದಲ್ಲಿ ಶ್ರೇಷ್ಠತೆಯನ್ನು ಪ್ರತಿಪಾದನೆ ಮಾಡುತ್ತಿದ್ದ ಕೆಲವೇ ಜಾತಿಗಳ ಸಾಂಸ್ಕೃತಿಕ ಶ್ರೇಷ್ಠತೆಗೆ ಸವಾಲಾಗಿ ತಮ್ಮ ಸಾಹಿತ್ಯ ರಚನೆ ಮಾಡಿದವರು ಎಂಬುವುದು. ಇದೂ ಕೂಡ ಬಹಳ ಆಶ್ಚರ್ಯಕರವಾಗಿರುವ ವಿದ್ಯಮಾನವೇ ಸರಿ.

* * *

ಅವರು ಜನಸಮೂಹಗಳ ಆಶಯವನ್ನು ಜನಸಮೂಹಗಳ ಭಾಷೆಯಲ್ಲೇ ಹಳ್ಳಿಹಳ್ಳಿಗಳಿಗೆ ತಲುಪಿಸುವಂತಹ ಬಹಳ ದೊಡ್ಡ ಸಂತನಾಗಿ ರೂಪುಗೊಂಡರು. ಗಮನಿಸಬೇಕಾದ ವಿಷಯ ಏನು ಅಂದರೆ ಬೇರೆ ಎಲ್ಲ ದಾಸರಿಗೆ ಮೈ ತುಂಬ ಉಡುಪಿದೆ. ಕನಕದಾಸರಿಗೆ ಮಾತ್ರ ಕಲಾವಿದರ ಕಲ್ಪನೆಯಲ್ಲಿ ಮೈ ತುಂಬ ಉಡುಪಿಲ್ಲ. ಕಂಬಳಿಯನ್ನ ಹೊದ್ದಿದಾರೆ, ತಲೆಗೆ ಮುಂಡಾಸೂ ಇಲ್ಲ. ಅಂದರೆ ನೇರವಾಗಿ ಕೆಳಜಾತಿ ಸೂಚಕವಾಗಿರುವಂತಹ, ಸಾಮಾನ್ಯವಾಗಿ ನಾವು ಬೀದಿ ಬೈರಾಗಿಗಳು ಅಂತ ಯಾರನ್ನ ಕರೀಬಹುದೋ ಆ ಬೀದಿ ಬೈರಾಗಿಗಳ ರೂಪದಲ್ಲೇ ನಮಗೆ ಕನಕದಾಸರು ಕಂಡುಬರುತ್ತಾರೆ. ಆ ಉಡುಪಿನಲ್ಲೇ ಆತ ರಾಜ್ಯಾದ್ಯಂತ ಓಡಾಡಿದರು.

ನಾವಿಲ್ಲಿ ಗಮನಿಸಬೇಕಾದದ್ದು ಏನೆಂದರೆ ಆವರೆಗೆ ಕರ್ನಾಟಕದ ಹಲವು ಪ್ರದೇಶಗಳನ್ನು, ಗ್ರಾಮಗಳನ್ನು ಸುತ್ತಿ, ಹಳ್ಳಿಹಳ್ಳಿಗಳಲ್ಲಿ ತನ್ನ ನೀತಿಯನ್ನು ಪ್ರಚಾರ ಮಾಡಿದ, ಈ ರೀತಿ ಅಪರಿಚಿತ ಸಮೂಹವನ್ನು ಉದ್ದೇಶಿಸಿ ತನ್ನ ಕಾಣ್ಕೆಗಳನ್ನು ಪ್ರತಿಪಾದನೆ ಮಾಡಿದ ಸಂಕಥನಕಾರರು ಅಥವಾ ಕವಿಗಳು ಈ ಹಿಂದೆ ಬಂದಿರಲಿಲ್ಲ. ಕನಕದಾಸ ಮತ್ತು ಸ್ವಲ್ಪ ಮಟ್ಟಿಗೆ ಪುರಂದರದಾಸರು ಮಾತ್ರವೇ ದಾಸಕೂಟವನ್ನು ಕಟ್ಟಿಕೊಂಡು ಗ್ರಾಮಗ್ರಾಮಗಳಲ್ಲಿ ವಿಚಾರಗಳನ್ನು ಹರಡುತ್ತಾ ಹೋದರು. ಆ ಮುಖಾಂತರ ಒಂದು ಹೊಸ ಜನಪರ ಭಕ್ತಿ ಪ್ರಜ್ಞೆಯನ್ನು ಸೃಷ್ಟಿ ಮಾಡಿದರು. ಅದರ ಅಂಗವಾಗಿಯೇ ಮೇಲ್ಜಾತಿ ಜನರಿಗೆ ಕುಲದ ಬಗ್ಗೆ ಇರುವ ಅಹಂಕಾರವನ್ನು ತಿಳಿಹೇಳಿದರು.

* * *

ದೊರೆಯಾಗಿದ್ದಂತಹ ಕನಕದಾಸರು ತಾನು ದೊರೆ ಅಂತ ಕರೆದುಕೊಂಡಾಗ ನಿಜದ ಅರ್ಥದಲ್ಲಿ ಧರಾಧೀಶರಿಗೆ ದಾಸನಾಗಿದ್ದರು. ಮಾಂಡಲೀಕನಾಗಿದ್ದಾಗ ಇನ್ನೊಬ್ಬ ನರಾಧೀಶನ ಅಧೀನದವನಾಗಿದ್ದು, ಅವನ ದಾಸನಾಗಿದ್ದರು. ಆ ಪದವಿಯನ್ನು ಬಿಟ್ಟು, ತಾನು ಕೃಷ್ಣನ ದಾಸ ಅಂತ ಹೊರಟಾಗ ನಿಜಕ್ಕೂ ದೊರೆಯಾದರು. ಯಾಕೆಂದರೆ



ಈಗ ಅವರು ಪಡೆದಿರುವ ದಾಸತ್ವ ನರಾಧೀಶರಿಗೆ ತೋರಿಸುತ್ತಿರುವ ದಾಸತ್ವ ಅಲ್ಲ. ಇವರೆಲ್ಲರನ್ನು ಮೀರಿದ ಎಲ್ಲರಿಗೂ ಒಡೆಯನಾದ ಭಗವಂತನಿಗೆ ತೋರಿಸುತ್ತಿರುವ ದಾಸತ್ವ. ದೇವರಿಗೆ ಮಾತ್ರವೇ ಅವರು ದಾಸ. ಭೂಮಿ ಮೇಲೆ ಇರುವಂತಹ ಯಾವುದೇ ಭೂಪತಿಗಳಿಗೆ ಅವರು ದಾಸರಲ್ಲ. ಆದ್ದರಿಂದಲೇ ದಾಸನೆಂದು ತನ್ನನ್ನು ಕರೆದುಕೊಂಡಾಗ ನಿಜಕ್ಕೂ ದೊರೆಯಾದರು ಕನಕದಾಸರು.

ಆದ್ದರಿಂದಲೇ ಕನಕದಾಸರು ನೀಡಿದ ಬಹಳ ದೊಡ್ಡ ಸಂದೇಶ ಏನು ಅಂತ ಹೇಳಿದರೆ ನಾವು ಇಲ್ಲಿ ಭೂಸುರರಾಗಿರುವವರಿಗೆ, ನರಾಧೀಶರಿಗೆ ದಾಸನಾಗಿರುವವರೆಗೆ ನಮಗೆ ಮುಕ್ತಿ ಇಲ್ಲ. ನಮ್ಮ ಸ್ವಾತಂತ್ರ್ಯವನ್ನು, ನಮ್ಮ ಶ್ರೇಷ್ಠತೆಯನ್ನ, ಬದುಕಿನ ಸಾರ್ಥಕತೆಯನ್ನ ಪಡೆಯಬೇಕು ಅಂತಾದರೆ ನಾವು ಈ ಎಲ್ಲ ಗುಲಾಮಗಿರಿಗಳನ್ನು, ಕಟ್ಟಳೆಗಳನ್ನು ಮೀರುವ ಹಂತಕ್ಕೆ ಏರಬೇಕು. ಆಗ ಮಾತ್ರವೇ ನಾವು ನಮ್ಮ ಬದುಕಿನ ಸಾರ್ಥಕತೆಯನ್ನು ಕಾಣೋದಕ್ಕೆ ಸಾಧ್ಯ. ಸಂಪತ್ತಾಗಲಿ, ಅಧಿಕಾರ ಹುದ್ದೆಗಳಾಗಲಿ, ಬಿರುದುಗಳಾಗಲಿ ನಮ್ಮ ಶ್ರೇಷ್ಠತೆಗೆ ಕಾರಣ ಆಗುವುದಿಲ್ಲ. ಅವುಗಳೆಲ್ಲವನ್ನು ಮೀರಿದಾಗ ಮಾತ್ರ ಸಾರ್ಥಕ ವ್ಯಕ್ತಿಗಳಾಗುತ್ತೀವಿ ಅನ್ನುವಂತಹ ವಿಚಾರಧಾರೆಯನ್ನು ಪ್ರಬಲವಾಗಿ ಮಂಡಿಸಿದ ಕನಕದಾಸರು ಅದೇ ಕಾರಣಕ್ಕೆ ನಮ್ಮಲ್ಲಿ ಪ್ರಾತಃಸ್ಮರಣೀಯರಾಗಿದ್ದಾರೆ.

**ಡಾ. ಬಂಜಗೆರೆ ಜಯಪ್ರಕಾಶ**

## ಕನಕದಾಸರ ಭಕ್ತಿಯ ನೆಲೆಗಳು

'ಭಕ್ತಿ' ಎಂಬುದು ಒಂದು ಲೋಕದೃಷ್ಟಿ. ಹೀಗಾಗಿ ಭಕ್ತಿ ಸಿದ್ಧಾಂತಕ್ಕೆ ಅದರದ್ದೇ ಆದ ಕೆಲವು ನಿಲುವುಗಳು ಇರುತ್ತವೆ. ಭಾರತದಲ್ಲಿ ಭಕ್ತಿ ಪಂಥಗಳು ಹಲವು ಕಾಲಗಳಲ್ಲಿ ಬೇರೆ ಬೇರೆ ಪ್ರದೇಶಗಳಲ್ಲಿ ತಲೆಯೆತ್ತಿ ಸಮಾಜವನ್ನು ಪ್ರಭಾವಿಸಿ ಕಾಲಕ್ರಮೇಣ ಹಿಂದಕ್ಕೆ ಸರಿಯುವುದು ಕಂಡು ಬರುತ್ತದೆ. ಹೀಗೆ ಬೇರೆ ಬೇರೆ ಭಕ್ತಿ ಪಂಥಗಳು ಹುಟ್ಟಿಕೊಂಡಿದ್ದರೂ ಅವುಗಳಲ್ಲಿ ಕೆಲವು ಸಾಮಾನ್ಯ ಲಕ್ಷಣಗಳು ಕಂಡು ಬರುತ್ತವೆ. ಮೊದಲನೆಯದಾಗಿ ಈ ಭಕ್ತಿ ಪಂಥಗಳು ಹುಟ್ಟಿಕೊಳ್ಳುವುದಕ್ಕೂ ಸಮಾಜದಲ್ಲಿ ಭೋಗ ಜೀವನವು ಮುನ್ನಲೆಗೆ ಬರುವುದಕ್ಕೂ ಹತ್ತಿರದ ಸಂಬಂಧವಿದೆ. ಧರ್ಮ ಮತ್ತು ಪ್ರಭುತ್ವಗಳು ಒಂದಾಗಿ ಸಮಾಜದ ಸಾಮಾನ್ಯರ ಮೇಲೆ ಹೇರುವ ಹಲವು ನಿಯಂತ್ರಣಗಳು, ಮತ್ತು ಸಾಮಾನ್ಯರ ಬದುಕು ನರಕವಾಗಿ ಮೇಲ್ವರ್ಗದವರ ಜೀವನ ಮಾತ್ರ ವೈಭವೀಕೃತವಾದಾಗಲೆಲ್ಲಾ ಅದನ್ನು ಎದುರಿಸುವುದು ಸಾಮಾನ್ಯರಿಗೆ ಮತ್ತು ಸೂಕ್ಷ್ಮಮತಿಗಳಿಗೆ ಕಷ್ಟದ ಕೆಲಸವಾಗುತ್ತದೆ. ಬಲಿಷ್ಠ ರಾಜ, ಸೈನ್ಯ, ಧರ್ಮಗಳ ವಿರುದ್ಧ ಸಾಮಾನ್ಯರು ಹೋರಾಡುವುದು ಸಾಧ್ಯವೇ ಇಲ್ಲದ ಸ್ಥಿತಿಯಲ್ಲಿ ಆ ಸಂಸ್ಥೆಗಳನ್ನು ನಿರಾಕರಿಸಿ ಸರಳತೆಯ ಮೂಲಕ ಅವುಗಳಿಗೆ ಉತ್ತರ ಕೊಡುವ ಕ್ರಮವಾಗಿಯೂ ಭಕ್ತಿ ಪಂಥಗಳನ್ನು ಕಾಣಬಹುದಾಗಿದೆ. ಅಲ್ಲದೆ, ಈ ಭಕ್ತಿಪಂಥಗಳು ಮನುಷ್ಯ ಮನುಷ್ಯರ ನಡುವಿನ ಸಂಬಂಧಕ್ಕೆ ತೊಡಕಾಗುವ ಜಾತಿ, ವರ್ಗ, ಲಿಂಗಭೇದ ಮೊದಲಾದವುಗಳನ್ನು ನಿರಾಕರಿಸುವುದು ಕೂಡ ಭಕ್ತಿ ಪಂಥಗಳು ಅತಿ ವಿಶಿಷ್ಠ ಎನಿಸಲು ಕಾರಣವಾಗಿದೆ.

ಭಾರತದಲ್ಲಿ ಕ್ರಿ.ಶ.೬ನೆಯ ಶತಮಾನದ ನಂತರದಲ್ಲಿ ಭಕ್ತಿ ಚಳುವಳಿಗಳು ಕಂಡು ಬರುತ್ತವೆ. ಭಕ್ತಿಯ ಬಗೆಗೆ ಉಲ್ಲೇಖಗಳು ವೇದ, ಉಪನಿಷತ್ತು,ಸ್ಮೃತಿ, ಪುರಾಣ ಮತ್ತು ಸೂತ್ರಗಳಲ್ಲಿ ಕಾಣಿಸುತ್ತವೆ. 'ಭಕ್ತಿ'ಯ ಕುರಿತಾದ 'ನಾರದ ಸೂತ್ರ' ಹಾಗೂ 'ಶಾಂಡಿಲ್ಯ ಸೂತ್ರ'ಗಳ ನಿರೂಪಣೆಗಳು ಕುತೂಹಲಕರವಾಗಿವೆ.

'ಶಾಂಡಿಲ್ಯ ಭಕ್ತಿ ಸೂತ್ರ'ವು ಭಕ್ತಿಯನ್ನು 'ಪರಾಭಕ್ತಿ' ಎಂದು ಕರೆದು ಆ ಭಕ್ತಿಯು ಪರಾನುರಕ್ತಿ ರೂಪವಾದುದೆಂದು ಬಣ್ಣಿಸುತ್ತದೆ. ಲೌಕಿಕ ವಸ್ತುಗಳಲ್ಲಿ ನಾವು ತೋರಿಸುವ ಅನುರಕ್ತಿ ಅಥವಾ ಅನುರಾಗವು ಭಕ್ತಿ ಎಂದೆನಿಸುವುದಿಲ್ಲ. ದೇವರಲ್ಲಿ ನಾವು ತೋರಿಸುವ ಅತ್ಯುತ್ಕಟವಾದ (ಪರಾ) ಅನುರಕ್ತಿಯೇ ಭಕ್ತಿ ಎಂದು ಶಾಂಡಿಲ್ಯ ಸೂತ್ರವು ಸ್ಪಷ್ಟಪಡಿಸುತ್ತದೆ. ಲೌಕಿಕ ವಸ್ತುಗಳಲ್ಲಿ ತೋರಿಸುವ ಅನುರಕ್ತಿ ಸಾಂಸಾರಿಕ



ಬಂಧನಕ್ಕೆ ಕಾರಣವಾದದ್ದು. ಆದರೆ ಭಗವಂತನಲ್ಲಿ ತೋರಿಸುವ ಅನುರಕ್ತಿ ಸಂಸಾರದಿಂದ ವಿಮೋಚನೆಗೆ ಕಾರಣವಾದದ್ದು. ಆದ್ದರಿಂದ ಅಂತಹ ಅನುರಕ್ತಿಯನ್ನು ಮಾಡದೆ ಇರಬಾರದೆಂದು ಶಾಂಡಿಲ್ಯ ಸೂತ್ರವು ಹೇಳುತ್ತದೆ.

ಭಕ್ತಿಯು ಮೂಲಭೂತವಾಗಿ ಒಂದೇ ಆದರೂ ಬೇರೆ ಬೇರೆ ನಿಮಿತ್ತಗಳಿಂದ ಅದು ೧೧ ವಿಧಗಳೆಂದು ನಾರದ ಭಕ್ತಿಸೂತ್ರವು ಹೇಳುತ್ತದೆ. ಅವುಗಳೆಂದರೆ ೧. ಗುಣಮಹಾತ್ಮ್ಯಾಸಕ್ತಿ ೨. ರೂಪಾಸಕ್ತಿ ೩. ಪೂಜಾಸಕ್ತಿ ೪. ಸ್ಮರಣಾಸಕ್ತಿ ೫. ದಾಸ್ಯಾಸಕ್ತಿ ೬. ಸಖ್ಯಾಸಕ್ತಿ ೭. ವಾತ್ಸಲ್ಯಾಸಕ್ತಿ ೮. ಕಾಂತಾಸಕ್ತಿ ೯. ಆತ್ಮನಿವೇದನಾಸಕ್ತಿ ೧೦. ತನ್ಮಯಾಸಕ್ತಿ ೧೧. ಪರಮ ವಿರಹಾಸಕ್ತಿ.

ಕನ್ನಡ ನಾಡಿನಲ್ಲಿ ನಡೆದುಹೋದ ಶರಣ ಮತ್ತು ದಾಸ ಪಂಥಗಳನ್ನು ನಾವು ಮತ್ತೆ ಮತ್ತೆ ಜೊತೆ ಜೊತೆಯಲ್ಲೇ ನೆನಪಿಸಿಕೊಳ್ಳುತ್ತೇವಾದರೂ, ಹೋಲಿಸುತ್ತೇವಾದರೂ ಅವೆರಡರ ಸ್ವರೂಪದಲ್ಲಿ ಕೆಲವು ವ್ಯತ್ಯಾಸಗಳಿವೆ. ವಚನ ಚಳುವಳಿಯ 'ಅನುಭವ ಮಂಟಪ'ದ ಪರಿಕಲ್ಪನೆಯಲ್ಲಿ ಅದರ ಪ್ರವೇಶಕ್ಕೆ ಗುರುಶಿಷ್ಯ ಸಂಬಂಧದ ನಿಯಮಗಳಿಲ್ಲ. ಅದು ಭಕ್ತರಾಗಬಯಸುವವರಿಗೆಲ್ಲಾ ಮುಕ್ತ ಪ್ರವೇಶ ನೀಡುತ್ತಿತ್ತು. ಆದರೆ ದಾಸರಲ್ಲಿ ದಾಸಕೂಟ, ವ್ಯಾಸಕೂಟದ ಪರಿಕಲ್ಪನೆ ಇದ್ದು ಇದು ಗುರುಶಿಷ್ಯ ಸಂಬಂಧದ ಮೂಲಕ ವಿಸ್ತರಿಸಿಕೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ಶರಣರಿಗಿಂತ ದಾಸರಿಗೆ ಸ್ವಾತಂತ್ರ್ಯ ಕಡಿಮೆಯೆಂದೇ ಹೇಳಬಹುದು.

ಇದರಲ್ಲಿ ದಾಸಪಂಥವು ಅನುಸರಿಸುವುದು ದಾಸ್ಯಾಸಕ್ತಿಯನ್ನು. ದಾಸ್ಯಾಸಕ್ತಿ ಎಂದರೆ, ದೇವನ ಅನಂತ ಸದ್ಗುಣಗಳನ್ನು ಅರಿತು ಅವನ ದಾಸನು ತಾನೆಂಬ ಭಾವನೆಯನ್ನು ಹೊಂದುವುದು.(ಅದೇ; ಪು:೨೫೫) ಹೀಗೆ ಇಂತಹ ಹಂತ ತಲುಪಿದವರನ್ನು ಮಾತ್ರ ದಾಸರು ಭಕ್ತರೆಂದು ಒಪ್ಪಿಕೊಳ್ಳುತ್ತಾರೆ. ಕನಕದಾಸರ ಕೀರ್ತನೆಯೊಂದು ಹೀಗಿದೆ:

**ಹ್ಯಾಂಗೆ ನೀ ದಾಸನಾದಿ ಪ್ರಾಣಿ**
**ಹ್ಯಾಂಗೆ ದಾಸನಾದಿ ಹೀಂಗೆ ಸಂಸಾರದೊಳು**
**ಮಂಗನಂದದಿ ಭಂಗಪಡುವವ**
**ಆಸೆಯ ಬಿಡಲಿಲ್ಲ ಕಾಸುಗಳಿಸುವೆಯಲ್ಲ**
**ದೋಷಕ್ಕೆ ಗುರಿಯಾಗಿ ಹೇಸಿಕೆಯೊಳು ಬಿದ್ದು**
**ತನುವು ನನ್ನದು ಎಂದು ತನಯ ಮಾನಿನಿಯರೆ**
**ಇನಿತು ಎನಗೆ ಗತಿಯೆಂಬುವ ಮೂಢನೆ**
. . . . .

**ಕಾಲುಗೆಜ್ಜೆಯ ಕಟ್ಟಿ ಮೇಲೆ ಕರತಾಳ ಪಿಡಿದು**
**ಶ್ರೀ ಲೋಲನ ಗುಣ ಪೊಗಳಿ ನಟಿಸದಲೆ**
**ಕುಣಿದು ಹರಿಯ ಮುಂದೆ ಮಣಿದು ಸಜ್ಜನ ಪದಕೆ**
**ಅಣಿಮಾದ್ಯಷ್ಟಸಿದ್ಧಿ ಕೈಗೊಳ್ಳದವನಾಗಿ**
. . . . .

**ಪಕ್ಷಿವಾಹನನ ಗುಣ ಲೆಕ್ಕಿಸಿ ಪೊಗಳದೆ**
**ಬೆಕ್ಕಸ ಬೆರಗಾಗಿ ಅಕ್ಕಿಗೆ ತಿರುಗುವವ**
**ಭೋಗಿಶಯನನುರಾಗದಿ ಭಜಿಸದೆ**
**ಕಾಗಿನೆಲೆಯಾದಿಕೇಶವರಾಯನೆನದೆ**
**ಹ್ಯಾಂಗೆ ನೀ ದಾಸನಾದಿ . . .**

ಮೇಲಿನ ಭಾವ ನೆಲೆಯೂರುವುದು ಲೌಕಿಕದ ಆಸೆಗಳನ್ನು ತ್ಯಜಿಸಿದ ಮೇಲೆಯೇ. ಹೀಗಾಗಿ, ದಾಸಪಂಥವು ಭಕ್ತರಿಂದ ಲೌಕಿಕದ ಆಸೆಯನ್ನು ಮೀರುವುದನ್ನು ನಿರೀಕ್ಷಿಸುತ್ತದೆ. ಮಾತ್ರವಲ್ಲ ಭಕ್ತಿ ಎಂಬ ಪರಿಕಲ್ಪನೆಯು ಈ ಭೂಮಿಯ ಮೇಲಿನ ಎಲ್ಲ ವಸ್ತು ವಿಷಯವನ್ನು ಸಮಾನವಾಗಿ ಪರಿಗಣಿಸುತ್ತದೆ. ಇದು ಭೇದ ಭಾವವನ್ನು ಮಾಡುವುದಿಲ್ಲ. ನಾರದ ಸೂತ್ರ ಮತ್ತು ಶಾಂಡಿಲ್ಯ ಸೂತ್ರಗಳು ಇದನ್ನು ಸ್ಪಷ್ಟವಾಗಿ ಹೇಳುತ್ತವೆ. "ಭಕ್ತರಲ್ಲಿ ಜಾತಿ, ವಿದ್ಯೆ, ರೂಪ, ಕುಲ, ಧನ, ಕರ್ಮ ಮುಂತಾದವುಗಳಿಂದ ಯಾವ ಭೇದವೂ ಇರಲಾರದು. ಏಕೆಂದರೆ ಭಕ್ತರೆಲ್ಲರೂ ಭಗವಂತನಿಗೆ ಆತ್ಮೀಯರು ಎಂದು ನಾರದ ಭಕ್ತಿ ಸೂತ್ರ ಹೇಳಿದರೆ, ಎಲ್ಲ ಮಾನವರೂ, ಜನರು ಅತ್ಯಂತ ಕೀಳೆಂದು ಹೇಳುವ ಕುಲದಲ್ಲಿ ಹುಟ್ಟಿದವರೂ ಸೇರಿದಂತೆ, ಭಕ್ತಿ ಮಾರ್ಗವನ್ನನುಸರಿಸುವ ಹಕ್ಕನ್ನು ಸಮಾನವಾಗಿ ಪಡೆದಿದ್ದಾರೆ ಎಂಬುದಾಗಿ ಶಾಂಡಿಲ್ಯ ಸೂತ್ರ ಹೇಳುತ್ತದೆ."

ಭಕ್ತಿಯೆಡೆಗೆ ಕನಕದಾಸರಂಥವರು ಆಕರ್ಷಿತರಾಗಲು ಭಕ್ತಿಪಂಥವು ಪ್ರತಿಪಾದಿಸುವ, ಮೇಲೆ ಹೇಳಲಾದ ಮಾನವೀಯ ಮುಖಗಳೂ ಕಾರಣವಾಗಿವೆ. ಕನಕದಾಸರಿಗೆ ಶ್ರೀವೈಷ್ಣವ ಪರಂಪರೆಯ ತಾತಾಚಾರ್ಯರ ಪ್ರಭಾವವಾಗಿ ಅವರ ಮೂಲಕ ರಾಮಾನುಜರ ತತ್ವಗಳ ಪರಿಚಯವಾಗುತ್ತದೆ. ಈ ತತ್ವಗಳಿಂದ ಪ್ರಭಾವಿತರಾದ ಕನಕರು ದಾಸತತ್ವವನ್ನು ಅನುಸರಿಸಿದರು. ತಮ್ಮ ಮೊದಲ ಕೃತಿ ಮೋಹನತರಂಗಿಣಿಯಲ್ಲಿ ಇದನ್ನು ಅವರು ಉಲ್ಲೇಖಿಸಿದ್ದಾರೆ. ಹಾಗೂ ಮುಂದೆ ಅವರು ಮಧ್ವಾಚಾರ್ಯರನ್ನು ಹಾಗೂ ಅವರ ಶಿಷ್ಯರುಗಳನ್ನೂ ನೆನಪಿಸಿಕೊಳ್ಳುತ್ತಾರಾದರೂ ಕನಕರಿಗೆ ರಾಮಾನುಜಾಚಾರ್ಯರ ಪ್ರಭಾವವೇ ಹೆಚ್ಚು. ರಾಮಾನುಜರು ಹಳ್ಳಿ ಹಳ್ಳಿ ತಿರುಗಿ ಸಾಮಾನ್ಯರ ಜೊತೆ ಬೆರೆತವರು. ಕನಕರೂ ಹಲವು ಊರುಗಳನ್ನು ಸುತ್ತಿದವರು.

ಭಕ್ತಿಯನ್ನು ಕನಕದಾಸರು ವ್ಯಾಖ್ಯಾನಿಸಿಕೊಂಡ ಬಗೆ ಯಾವುದು ಎಂಬುದೂ



ಮುಖ್ಯ. ಭೋಗದ ಎದುರು ಭಕ್ತಿಯನ್ನು ಇಡುವಾಗ ಅವರು ಭಕ್ತಿಯನ್ನು 'ಆತ್ಮಸಾಂಗತ್ಯ'ದ ನೆಲೆಯಾಗಿ ಕಾಣುತ್ತಾರೆ. ಸಾಮಾಜಿಕ ರಚನೆಯ ವಿಘಟಿತ ಸ್ಥಿತಿಗೆ ಮುಲಾಮಾಗಿ ಭಕ್ತಿಯನ್ನು ಮಂಡಿಸುತ್ತಾರೆ. ಆತ್ಮಸಾಂಗತ್ಯದ ಅಂಗವಾಗಿ ವ್ಯಕ್ತವಾಗುವ ಭಕ್ತಿಯಲ್ಲಿ ಪರಸ್ಪರ ಕೊಡುವುದರಲ್ಲಿ, ಕಳೆದುಕೊಳ್ಳುವುದರಲ್ಲಿ, ನಿವೇದಿಸಿಕೊಳ್ಳುವುದರಲ್ಲಿ 'ಪ್ರೀತಿ'ಯನ್ನು ಕಂಡುಕೊಳ್ಳಲಾಗುತ್ತದೆ. ಆದರೆ ಮಾರುಕಟ್ಟೆ ಅಥವಾ ವ್ಯಾಪಾರವೇ ಕೇಂದ್ರವಾದ ಸಾಮಾಜಿಕ ರಚನೆಯೊಳಗೆ 'ವಸ್ತುಸಾಂಗತ್ಯ' ಮುನ್ನೆಲೆಗೆ ಬರುತ್ತದೆ. ಇಲ್ಲಿ ಪಡೆದುಕೊಳ್ಳುವುದರಲ್ಲಿ, ಗಳಿಕೆಯಲ್ಲಿ, ಗಳಿಸಿದ ವಸ್ತುಗಳೊಂದಿಗೆ ಸಮೀಕರಿಸಿಕೊಳ್ಳುವುದರಲ್ಲಿ ಮತ್ತು ನಿವೇದನೆಗಿಂತ 'ಆಜ್ಞೆ'ಗಳಲ್ಲಿ ಪ್ರೀತಿಯನ್ನು ಕಂಡುಕೊಳ್ಳಲಾಗುತ್ತದೆ. ಆತ್ಮಸಾಂಗತ್ಯದ ಕೊರತೆಯಿಂದ ಸಾಮಾಜಿಕ ರಚನೆ 'ಅನಾಥ'ವಾಗುತ್ತಾ ಸಾಗುತ್ತದೆ. ವ್ಯಕ್ತಿಯನ್ನೂ ಕೂಡ ಈ ಅನಾಥತೆ ಕಾಡುತ್ತದೆ. ಭಕ್ತಿ ಚಳುವಳಿ ಈ 'ಅವಕಾಶ'ದಲ್ಲಿ ಉದಿಸುತ್ತದೆ. ಮತ್ತದು ಎಲ್ಲಾ ಬಲಿಷ್ಠ ಯಜಮಾನಿಕೆಗಳನ್ನು ನಿರಾಕರಿಸುವ ಮೂಲಕ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತದೆ. ಸಾಂಸ್ಥಿಕವಾದ ಎಲ್ಲ ರಚನೆಗಳ ನಿರಾಕರಣೆ– ದೇವಾಲಯ, ಮಠ, ಪ್ರಭುತ್ವ– ಯ ಅಸ್ತ್ರವಾಗಿಯೂ ಕನಕರಲ್ಲಿ ಭಕ್ತಿ ಕಾಣುತ್ತದೆ. ಇವುಗಳ ನಿರಾಕರಣೆಯೆಂದರೆ ಅದು ಇವುಗಳು ಪ್ರತಿಪಾದಿಸುವ ಶ್ರೇಣೀಕರಣದ ನಿರಾಕರಣೆ ಎಂದೇ ಅರ್ಥ. ಈ ಮೂಲಕ ಇವರು ನಿಯಂತ್ರಣ ಕೇಂದ್ರಿತ ಅಧಿಕಾರದ ರಚನೆಗಳನ್ನೂ ನಿರಾಕರಿಸುತ್ತಾರೆ. ಈ ಅಧಿಕಾರ ಕೇಂದ್ರಗಳು ಅಂತರಂತದಲ್ಲಿ ಎಷ್ಟು ಟೊಳ್ಳು ಎಂಬುದನ್ನು ಅವರು ತಮ್ಮ ಕೃತಿಗಳ ಮೂಲಕ ಸಾರಲು ಪ್ರಯತ್ನಿಸುತ್ತಾರೆ. ಇದರ ಒಂದು ಹೆಜ್ಜೆಯಾಗಿಯೇ "ಈಶ ನೀನು ದಾಸ ನಾನು" ಎಂಬ ಭಾವ ಕೆಲಸ ಮಾಡುತ್ತದೆ. ಇದರರ್ಥ 'ನಾನು' ಎಂಬುದನ್ನು ಕಳೆದುಕೊಂಡು 'ನಾವು' ಆಗಬೇಕು ಎಂಬುದಾಗಿದೆ. ಭಕ್ತಿಪಂಥಗಳು ಯಾವಾಗಲೂ ಸಾಮುದಾಯಿಕತೆಯನ್ನು ಸಾಧಿಸಬಯಸುತ್ತವೆ. ಹೀಗಾಗಿ ಅವರಿಗೆ ಕುರುಹು ಕಳೆದುಕೊಳ್ಳುವುದು ಮುಖ್ಯ. ಬ್ರಾಹ್ಮಣನೋ, ದಲಿತನೋ, ಗಂಡೋ,ಹೆಣ್ಣೋ, ರಾಜನೋ, ಆಳೋ ಯಾರೇ ಆಗಿರಲಿ ಮೊದಲು ಅವರು ಕುರುಹು ಕಳೆದುಕೊಳ್ಳಬೇಕು. ಆಗ ಉಳಿಯುವುದು 'ದಾಸ' ಎಂಬ ಕುರುಹು ಮಾತ್ರ. ಇಲ್ಲಿ ಮೇಲು ಕೀಳಿನ ಪ್ರಶ್ನೆಯೇ ಹುಟ್ಟುವುದಿಲ್ಲ.

**ಆತ್ಮ ಯಾವ ಕುಲ ಜೀವ ಯಾವ ಕುಲ**
**ತತ್ವೇಂದ್ರಿಯಂಗಳ ಕುಲ ಪೇಳಿರಯ್ಯ**
**ಆತ್ಮಾಂತರಾತ್ಮ ನೆಲೆಯಾದಿ ಕೇಶವ**
**ಆತನೊಲಿದ ಮೇಲೆ ಯಾತರ ಕುಲವಯ್ಯ**
**(ಕುಲ ಕುಲ ಕುಲವೆನ್ನುತಿಹರು)**

ಕುಲವೆಂಬುದೇ ಅರ್ಥಹೀನವೆನಿಸಿದ ಮೇಲೆ ಅದಕ್ಕಾಗಿ ಹೊಡೆದಾಡುವುದು ಇನ್ನೂ ಅರ್ಥಹೀನ ಎಂಬುದನ್ನೂ ಅವರ ಕುಲ ಕುಲ ಕುಲವೆಂದು ಹೊಡೆದಾಡದಿರಿ ಎಂಬ ಕೀರ್ತನೆ ಸ್ಪಷ್ಟಪಡಿಸುತ್ತದೆ. ಅಲ್ಲದೆ ಮನುಷ್ಯನಿಗೆ ಗುಣ ಮುಖ್ಯವೇ ಹೊರತು ಅವನ ಹೊರ ರೂಪಗಳಲ್ಲ ಎಂಬುದನ್ನು ಅವರು ಅತ್ಯಂತ ಖಚಿತವಾಗಿ ರಾಮಧಾನ್ಯ ಚರಿತ್ರೆಯಲ್ಲಿ ಹೇಳುತ್ತಾರೆ. ಮನುಜರೆಲ್ಲರೂ ಸಾಮುದಾಯಿಕತೆಯನ್ನು ಸಾಧಿಸಿಕೊಂಡು ಅಹಂ ತೊರೆದು 'ಅತಿಹಿತದಲ್ಲಿ ಇರಬೇಕು' ಎಂಬುದು ಭಕ್ತಿಪಂಥದ ಹಾಗೂ ಕನಕದಾಸರ ನಿಲುವಾಗಿದೆ. ದಾಸತ್ವವನ್ನು ತತ್ವವಾಗಿ ಸ್ವೀಕರಿಸುವ ಕನಕರು ಕೀರ್ತನೆಯೊಂದರಲ್ಲಿ " ಹಲವು ದಾಸರ ಮನೆಯ ಹೊಲೆದಾಸ ನಾನಯ್ಯ/ ಕುಲವಿಲ್ಲದ ದಾಸ ಕುರುಬ ದಾಸ/ ಛಲದಿ ನಿನ್ನ ಭಜಿಸುವವರ ಮನೆಯ ಮಾದಿಗ ದಾಸ/ ಸಲೆ ಮುಕ್ತಿ ಪಾಲಿಸೆನ್ನೊಡೆಯ ಕೇಶವನೆ." ಎನ್ನುತ್ತಾರೆ. ಭಕ್ತಿಯು ಆತ್ಯಂತಿಕವಾಗಿ ಮನುಷ್ಯನ ಎಲ್ಲ ಬವಣೆಗಳನ್ನು ನೀಗಬಲ್ಲ ಸಂಜೀವಿನಿ ಎಂಬ ನಂಬಿಕೆಯನ್ನು ಸಾರುತ್ತಾರೆ. ತಮ್ಮ ತಲ್ಲಣಿಸದಿರು ಕಂಡ್ಯ ತಾಳು ಮನವೆ/ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ಎಂಬ ಕೀರ್ತನೆಯಲ್ಲಿ ಅವರು ಈ ಸಂದೇಶವನ್ನು ಹೇಳುವುದನ್ನು ಗಮನಿಸಬಹುದು. ಕನಕರು ಭಕ್ತಿಯನ್ನು ಹಲವು ರೀತಿಯಲ್ಲಿ ಕಾಣಲು ಪ್ರಯತ್ನಿಸುತ್ತಾರೆ. ಲೋಕದ ಬದುಕಿನಲ್ಲಿ ಸುಜ್ಞಾನಿಗಳ ಸಂಗ ಮಾಡಲು ಬೇಕಾದುದು ಭಕ್ತಿ. ಕುಲದ ನೆಲೆಯನ್ನು ದಾಟಲು ಇರುವ ಸಾಧನ ಭಕ್ತಿ. ಈ ತನು ಮತ್ತು ಮನ ನಿನ್ನದು ಎಂಬುದನ್ನು ಕಾಣುವ ಮೂಲಕ ಅಹಂಕಾರವನ್ನು ಕಳೆದುಕೊಳ್ಳಲು ಸಹಾಯ ಮಾಡುವುದು ಭಕ್ತಿ. ನೆಚ್ಚಲು ಸಾಧ್ಯವಿಲ್ಲದ, ನೆಲೆಯಲ್ಲದ ಸಂಸಾರದ ಕಷ್ಟಗಳಿಂದ ಪಾರುಮಾಡುವುದು ಭಕ್ತಿ. ಸುಜ್ಞಾನ, ಸತ್ಯ, ಮೋಕ್ಷಗಳನ್ನು ಕಂಡುಕೊಳ್ಳುವ ದಾರಿ ಭಕ್ತಿ. ಹೀಗೆ ಕನಕರು ಕಂಡುಕೊಳ್ಳುವ ಭಕ್ತಿಯೆಂದರೆ ಅದು ಕೇವಲ ದೇವರನ್ನು ಭಜಿಸುವ ಒಂದು ಕ್ರಿಯೆಯಷ್ಟೇ ಅಲ್ಲ . ಬದಲಿಗೆ ಈ ಲೋಕದ ಬದುಕಿನಲ್ಲಿನ ಕೊರತೆಯನ್ನು ಅರ್ಥೈಸಿಕೊಳ್ಳುವುದರ ಜೊತೆಗೆ ಆ ಕೊರತೆಯನ್ನು ನೀಗಲು ಮಾಡುವ ಪ್ರಯತ್ನದ ಸಂಗಾತಿಯಾಗಿಯೂ ಇರುತ್ತದೆ. ಹೀಗಾಗಿ ಆತ್ಮಸಾಂಗತ್ಯದ ಮೂಲಕವೇ ಭಕ್ತಿಯನ್ನು ಸಮಾಜಪರವಾದ ಸ್ಪಂದನಕ್ಕೆ ಬಳಸಿಕೊಳ್ಳುವುದು ಕನಕದಾಸರ ಅನನ್ಯತೆಯಾಗಿದೆ.

**ಡಾ. ಸಬಿತಾ ಬನ್ನಾಡಿ**



# ಕನಕ ದರ್ಶನ

ಕನಕದಾಸರು ಸಾಕಷ್ಟು ದೂರ ವಿವಿಧ ಕ್ಷೇತ್ರಗಳನ್ನು ಸಂದರ್ಶಿಸಿ ತತ್ವಪ್ರಚಾರ ಮಾಡಿದ ಬರಿಗಾಲ ಸಂತ. ಈ ಹೊತ್ತಿಗೂ ಅದಕ್ಕೆ ಸಾಕ್ಷಿಯಾಗಿ ತಮಿಳುನಾಡಿನ ತಂಜಾವೂರಿನಲ್ಲಿ 'ಕನಕನ ಕೊಳ'ವನ್ನು ನಾವು ಕಾಣಬಹುದು. ರಾಜಸ್ತಾನದಲ್ಲಿ ಸ್ವತಃ ರಾಣಾಪ್ರತಾಪನೇ ಕಟ್ಟಿಸಿದ 'ಕನಕ ಬೃಂದಾವನ'ವಿದೆ. ಆಂಧ್ರದ ಕವಿಯೊಬ್ಬ ಅವರನ್ನು ಕುರಿತು ಹೇಳಿರುವ, 'ಕನಕ ಮೀರು ಬಂಗಾರ ತುನಕ : ಕನ್ನಡ ಕವುಲೆಲ್ಲ ನೂವೆನಕ' ಎಂಬ ಪ್ರಶಂಸೆಯ ಮಾತುಗಳು ಜನಪ್ರಿಯವಾಗಿವೆ. ತಿರುಪತಿಯಲ್ಲಿ ಕನಕದಾಸರನ್ನು ನೆನಪಿಸುವ ಹಲವು ಪವಾಡ ಕತೆಗಳು ಈಗಲೂ ಬೆಳೆಯುತ್ತಿವೆ. ಉಡುಪಿಯ 'ಕನಕನ ಕಿಂಡಿ'ಯಂತೂ ವಿಶ್ವಪ್ರಸಿದ್ಧ ಸಂಗತಿಯೆನಿಸಿದೆ. ಇವೆಲ್ಲವುಗಳನ್ನು ನೋಡಿದರೆ ಕನಕದಾಸರು ನಮ್ಮ ಅಲ್ಲಮನಂತೆ, ಕನ್ನಡದ ಭಕ್ತಿಚಳವಳಿಯು ಕಟ್ಟಿಕೊಟ್ಟ ವಿವೇಕವನ್ನು ದೇಶದುದ್ದಕ್ಕೂ ಪಸರಿಸಿದ ಸಂತಶ್ರೇಷ್ಠರು ಎಂಬುದು ಅರಿವಾಗುತ್ತದೆ. ಈ ನೆಲೆಯಲ್ಲಿ ಕೂಡ ಅವರು ಉಳಿದ ಹರಿದಾಸರಿಗಿಂತ ಅತ್ಯಂತ ಎತ್ತರದ ಸ್ಥಾನದಲ್ಲಿದ್ದಾರೆ.

ಹಾಗೆ ಎಲ್ಲಿಂದ ಎಲ್ಲಿಗೇ ಸುತ್ತಾಡಿ ಬಂದರೂ ಕಡೆಗೆ ಅವರು ನೆಲೆನಿಂತದ್ದು ಕಲ್ಯಾಣ ಕರ್ನಾಟಕದ ಕಾಗಿನೆಲೆಯಲ್ಲಿ. ಕಾಗಿನೆಲೆ ಕನಕದಾಸರ ಕರ್ಮಭೂಮಿ. ಅದು ಪ್ರಾಚೀನ ಕಾಲದಿಂದ ಹಲವು ರಾಜಸಂಸ್ಕೃತಿಯ ಆಡಳಿತಕ್ಕೆ ಒಳಪಟ್ಟ ಪ್ರಮುಖ ಕ್ಷೇತ್ರ. ಕದಂಬರ ಕಾಲದಿಂದಲೂ ಇದಕ್ಕೆ ವಿಶೇಷವಾದ ಹೆಸರಿದೆ. ವಿಜಯನಗರ ಅರಸರು ಇದಕ್ಕೆ ಕಾಯಕಲ್ಪ ನೀಡಿ ಒಂದು ವಿಶೇಷ ಸ್ಥಾನಮಾನ ನೀಡಿದರು. ಅದರ ಕುರುಹಾಗಿ ಕಾಗಿನೆಲೆಯಲ್ಲಿ ಇಂದಿಗೂ ನಾವು ಕೋಟೆ ಕೊತ್ತಳಗಳು, ಹಳೆಯ ಗುಡಿಗಳು, ವೀರಗಲ್ಲು–ಶಾಸನಗಳನ್ನು ಯಥೇಚ್ಛವಾಗಿ ಕಾಣಬಹುದು. ಅದಕ್ಕಿಂತ ಮುಖ್ಯವಾಗಿ ಜೈನ, ವೈಷ್ಣವ, ವೀರಶೈವ, ಇಸ್ಲಾಂ ಮುಂತಾದ ಸರ್ವಧರ್ಮ ಸಂಸ್ಕೃತಿಗಳ ಸಂಗಮಕ್ಷೇತ್ರವಾಗಿರುವುದು ಇದರ ವಿಶೇಷ. ಇವೆಲ್ಲಕ್ಕೂ ಕಳಶವಿಟ್ಟಂತೆ ಸಂತಕವಿ ಕನಕದಾಸರ ಬದುಕು ಮತ್ತು ಚಿಂತನೆಯ ಮಿಂಚುಗಳು ಬೆಳಗಿದ್ದು, ವಿಶ್ವಕ್ಕೆ ಪಾರಮಾರ್ಥಿಕ ಭಕ್ತಿಸಂದೇಶವನ್ನು ಸಾರಿದ್ದು–ಕಾಗಿನೆಲೆಯಿಂದ ಎಂಬುದು ಚಾರಿತ್ರಿಕ ಮಹತ್ವದ ಸಂಗತಿ ಆಗಿದೆ.

ಕಾಗಿನೆಲೆ ಕ್ಷೇತ್ರವು ಭಾರತದ ಭೂಪಟದಲ್ಲಿ ಹೆಸರಾಗಿರುವುದೇ ಕನಕದಾಸರಿಂದ. ಅದು ಅವರ ಸಾಧಕ ಬದುಕಿನ ಉದ್ದಕ್ಕೂ ಮಹತ್ವಪೂರ್ಣ ಪಾತ್ರವನ್ನು ವಹಿಸಿದೆ.

ಅಲ್ಲಿನ ಪರಿಸರ, ದೈವನೆಲೆಗಳು, ಸಂಸ್ಕೃತಿಯ ಕುರುಹುಗಳು, ಧರ್ಮಸಮನ್ವಯತೆ– ಕನಕದಾಸರಿಗೆ ತಮ್ಮ ಜ್ಞಾನ ಮತ್ತು ವಿವೇಕವನ್ನು ಪ್ರಜ್ವಲವಾಗಿ ಬೆಳಗಿಕೊಳ್ಳಲು ಬೆನ್ನಾಸರೆಯಾಗಿ ಒದಗಿಬಂದಿದೆ. ಹಾಗಾಗಿ ಕಾಗಿನೆಲೆಯು ಅವರ ಬಾಲ್ಯಕಾಲದಲ್ಲಿ ಸ್ಫೂರ್ತಿ ತುಂಬಿದ ಚೈತನ್ಯಕ್ಷೇತ್ರವೂ, ದಾಸ ಬದುಕಿಗೆ ದೀಕ್ಷೆ ಕೊಟ್ಟ ಸಾಕ್ಷಾತ್ಕಾರ ಕ್ಷೇತ್ರವೂ, ಮಾನವಮತವನ್ನು ಸಾರಲು ಪ್ರೇರಣೆ ಒದಗಿಸಿದ ತಪೋವನವೂ, ಬಹುರೂಪಿ ಕೃತಿಗಳ ಸೃಷ್ಟಿಗೆ ಕಾರಣವಾದ ಕಾವ್ಯಗಂಗೋತ್ರಿಯೂ ಆಗಿದೆ. ಆದ್ದರಿಂದಲೇ ತಮ್ಮ ತತ್ವಚಿಂತನೆಯ ತಾಯಿಬೇರಾದ ಕಾಗಿನೆಲೆಯ ಆದಿಕೇಶವನನ್ನು ಹೆಜ್ಜೆಹೆಜ್ಜೆಗೆ ಅಭಿಮಾನದಿಂದ ಕೊಂಡಾಡಿದ್ದಾರೆ. ಹಾಗೆ ನೋಡಿದರೆ ಕಾಗಿನೆಲೆಯ ಆದಿಕೇಶವನು ಸಹ ಅವರ ಆತ್ಮಾಭಿಮಾನದ ಸಂಕೇತವೇ ಆಗಿದ್ದಾನೆ.

* * *

ಒಟ್ಟಿನಲ್ಲಿ ಸಂತಮಹಾಕವಿ ಕನಕದಾಸರ ಜೀವನವೇ ಒಂದು ಮಹಾಕೃತಿಯಂತಿದೆ. ಜೀವವೊಂದು ನಿರಂತರ ವಿಕಾಸ ಪಥದಲ್ಲಿ ಬೆಳೆಬೆಳೆದು ಪರಿಪಕ್ವಗೊಳ್ಳುವ ರೀತಿಯಲ್ಲಿದೆ ಅವರ ಬಾಳ ಪಯಣ. ಕನ್ನಡ ದಾಸಕೂಟದ ಸುವರ್ಣಯುಗವನ್ನು ನಿರ್ಮಾಣ ಮಾಡಿದವರಲ್ಲಿ ಕನಕರದು ದೊಡ್ಡ ಪಾಲು. ಅಲ್ಲಿನ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ತತ್ವಗಳ ಮೇಲಾಟದಲ್ಲಿ ಅವರು ಯಾವುದೊಂದನ್ನು ತಿರಸ್ಕರಿಸದೆ ಅವುಗಳಲ್ಲಿಯ ಭಕ್ತಿತತ್ವಕ್ಕೆ ಶರಣಾದರು. ಜೊತೆಗೆ ಶೈವ–ವೈಷ್ಣವವನ್ನು ಸಮಾನವಾಗಿ ಗೌರವಿಸಬೇಕೆಂಬ ಸೌಹಾರ್ದತತ್ವವನ್ನು ಕಲಿಸಿದರು. ಮಾನವಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿದು ಸಾರಿದರು.

ಕನಕದಾಸರು ತಾವು ಕೆಳವರ್ಗದಲ್ಲಿ ಹುಟ್ಟಿದರು. ಆ ಕಾರಣಕ್ಕಾಗಿ ಮೇಲ್ವರ್ಗದವರಿಂದ ಪಡಬಾರದ ತೊಂದರೆಪಟ್ಟರು. ಆದರೆ ಎಂದೂ ಅವರು ಈ ಕಾರಣಕ್ಕಾಗಿ ಎದೆಗುಂದಲಿಲ್ಲ. ಇನ್ನೊಬ್ಬರ ಬಗ್ಗೆ ಹೀನಾಯವಾಗಿ ನಡೆದುಕೊಳ್ಳಲಿಲ್ಲ. ಹುಟ್ಟಿನಿಂದಾದ ಕಲ್ಪಿತ ಕುಲವನ್ನು ಮುಂದುಮಾಡಿ, ವ್ಯಕ್ತಿತ್ವಗಳನ್ನು ಮೇಲುಕೀಳಾಗಿಸುತ್ತಿದ್ದ ಸಮಾಜದ ಬಗ್ಗೆ ಅವರಿಗೆ ವಿಷಾದವಿತ್ತು. ಆದರೆ ಆಕ್ರೋಶವಿರಲಿಲ್ಲ. ಸತತ ಅಧ್ಯಯನದ ಪರಿಶ್ರಮದಿಂದ ತಾವು ಮೇಲೇರಿ ಬಂದರು. ಅಷ್ಟು ಮಾತ್ರವಲ್ಲದೆ, ತಮ್ಮ ಸುತ್ತಲಿನ ಸಮುದಾಯವನ್ನು ಮೇಲೆತ್ತುವ ಹೊಣೆ ಹೊತ್ತು ಕಾರ್ಯಪ್ರವೃತ್ತರಾದರು. ಆದ ಕಾರಣದಿಂದಲೇ ಅವರು ಕನ್ನಡ ನೆಲದ ಮನೆ ಮಾತಾದರು.

ಹೀಗೆ ಐದುನೂರಕ್ಕೂ ಹೆಚ್ಚು ವರ್ಷಗಳ ಕಾಲದಿಂದ ಕನ್ನಡ ಜನಮನದಲ್ಲಿ ಪ್ರಸಿದ್ಧರಾಗಿ ಉಳಿದಿರುವ ಕನಕದಾಸರು, ಯಾವ ಒಂದು ಮತಕ್ಕೂ ಅಂಟಿಕೊಳ್ಳದೆ ಅನಂತತತ್ವವನ್ನು ಒಪ್ಪಿಕೊಂಡು ಅದನ್ನು ಅಪ್ಪಿಕೊಂಡು ವಿಶ್ವಮಾನವತ್ವದ ನೆಲೆಗೆ ತುಡಿದ ವಿಭೂತಿ ಪುರುಷರು. ಅವರ ನೆನಪಿನಲ್ಲಿ ಕರ್ನಾಟಕ ಸರ್ಕಾರವು ಪ್ರತಿವರ್ಷ ನವೆಂಬರ್ ಅಥವಾ ಡಿಸೆಂಬರ್ ತಿಂಗಳಲ್ಲಿ 'ಕನಕದಾಸ ಜಯಂತಿ'ಯ ಮೂಲಕ



ಗೌರವ ಸಲ್ಲಿಸುತ್ತಿದೆ. ಕನಕದಾಸರ ಜೀವನ–ಸಂದೇಶ ಸಾರುವುದರ ಜೊತೆಗೆ ಅವರ ಹುಟ್ಟೂರು, ಐಕ್ಯರಾದ ಊರು ಹಾಗೂ ಸುತ್ತಮುತ್ತಲಿನ ಪರಿಸರವನ್ನು ಅಭಿವೃದ್ಧಿಪಡಿಸಿ ಸ್ಮಾರಕವಾಗಿಸುವ ಉದ್ದೇಶದಿಂದ ಕರ್ನಾಟಕ ಸರ್ಕಾರವು ಅವರ ಸಮಾಧಿ ಸ್ಥಳವಿರುವ ಕಾಗಿನೆಲೆಯಲ್ಲಿ ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ಸ್ಥಾಪಿಸಿದೆ. ಕನಕದಾಸರ ಜೀವನದರ್ಶನ, ಸಂದೇಶ ಮತ್ತು ಸಾಹಿತ್ಯ ಕುರಿತಂತೆ ಹೊಸ ಹೊಸ ಸಂಶೋಧನೆಗಳು, ಅಧ್ಯಯನಗಳು, ಪ್ರಕಟಣೆಗಳು ಹಾಗೂ ಪ್ರಸಾರದಂತಹ ಕಾರ್ಯಕ್ರಮಗಳನ್ನು ಉತ್ತೇಜಿಸುವ ಸಲುವಾಗಿ ಬೆಂಗಳೂರಿನಲ್ಲಿ ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರವನ್ನು ಸ್ಥಾಪಿಸಿ ಸ್ವಾಯತ್ತ ಸಂಸ್ಥೆಯ ಅಸ್ತಿತ್ವ ನೀಡಿ ಅನುದಾನ ನೀಡುತ್ತಿದೆ. ಈ ಅಧ್ಯಯನ ಕೇಂದ್ರವು ಹೊಸ ಹೊಸ ದೃಷ್ಟಿಕೋನದಿಂದ ಅಧ್ಯಯನಶೀಲ ವಿದ್ವಾಂಸ, ಸಂಶೋಧನಾರ್ಥಿಗಳಿಗೆ ಫೆಲೋಶಿಪ್ ನೀಡಿಕೆ, ಅಧ್ಯಯನಗಳಿಗೆ ಅನುದಾನ, ರಾಜ್ಯ–ರಾಷ್ಟ್ರಮಟ್ಟದಲ್ಲಿ ವಿಚಾರ ಸಂಕಿರಣ ಹಾಗೂ ಸಂವಾದಗೋಷ್ಠಿಗಳ ಏರ್ಪಾಟು, ವಿವಿಧ ಮಾಧ್ಯಮಗಳಲ್ಲಿ ಕನಕದಾಸರ ತತ್ವಾದರ್ಶಗಳ ಪ್ರದರ್ಶನ–ಪ್ರಸಾರ ಕಾರ್ಯ, ವಿವಿಧ ಭಾಷೆಗಳಿಗೆ ಕನಕದಾಸರ ಸಮಗ್ರ ಸಾಹಿತ್ಯ ಅನುವಾದ, ತೌಲನಿಕ ಅಧ್ಯಯನದ ಹಿನ್ನೆಲೆಯಲ್ಲಿ ಕಾರ್ಯಕ್ರಮಗಳು, ಕರ್ನಾಟಕ ತತ್ವಪದಕಾರರ ಸಮಗ್ರ ಸಾಹಿತ್ಯ ಪ್ರಕಟಣೆ, ಯುವಜನ–ವಿದ್ಯಾರ್ಥಿ ಸಮುದಾಯಕ್ಕಾಗಿ ಕನಕ ಸಂಸ್ಕೃತಿ ಕಮ್ಮಟ–ರಸಗ್ರಹಣ ಶಿಬಿರಗಳ ಸಂಘಟನೆ, ಹಿರಿಯ ಹಾಗೂ ಯುವ ವಿದ್ವಾಂಸರಿಗೆ ಪುರಸ್ಕಾರ ಮುಂತಾದ ಹಲವಾರು ರಚನಾತ್ಮಕ ಯೋಜನೆಗಳನ್ನು ರೂಪಿಸಿಕೊಂಡು ಜಾರಿಗೊಳಿಸುತ್ತಿದೆ. ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನಕದಾಸ ಸಂಶೋಧನಾ ಕೇಂದ್ರವನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕನಕ ಅಧ್ಯಯನ ಪೀಠವನ್ನು ಹಾಗೂ ಉಡುಪಿಯ ಎಂ.ಜಿ.ಎಂ.ಕಾಲೇಜಿನಲ್ಲಿ ಕನಕ ಅಧ್ಯಯನ ಸಂಶೋಧನಾ ಪೀಠವನ್ನು ತೆರೆದಿದ್ದು ಅವುಗಳು ಕನಕದಾಸರ ಕುರಿತಂತೆ ವಿವಿಧ ದಿಕ್ಕಿನಲ್ಲಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿವೆ. ಇದಲ್ಲದೆ ಕರ್ನಾಟಕ ಸರ್ಕಾರವು ಸ್ವತಃ ಕನಕದಾಸರ ಮತ್ತು ಹರಿದಾಸ ಸಾಹಿತ್ಯದ ಬಗ್ಗೆ ಅನನ್ಯ ಸೇವೆ ಸಲ್ಲಿಸಿದ ವಿದ್ವಾಂಸರಿಗೆ ಪ್ರತಿ ವರ್ಷ ನೀಡಲು ಕನಕದಾಸರ ಹೆಸರಿನಲ್ಲಿ 'ಕನಕಶ್ರೀ' ಪ್ರಶಸ್ತಿ ಸ್ಥಾಪಿಸಿದೆ.

ಇಂದಿಗೂ ಕಾಗಿನೆಲೆಯ ಕೆರೆದಂಡೆಯ ಮೇಲೆ ಅವರ ಗದ್ದುಗೆ (ಸಮಾಧಿ) ಇದೆ. ಅಲ್ಲಿ 'ಕನಕಮಂದಿರ' ನಿರ್ಮಾಣವಾಗಿದೆ. ಇದರ ಮಗ್ಗುಲಲ್ಲಿ ಕನಕದಾಸರ ಕಾಲದ ಸುವಿಶಾಲ ಅರಳಿ ಮರವಿದ್ದು, ಮಹಾಸಂತರ ವಿಕಾಸಜೀವನಕ್ಕೆ ಸಾಕ್ಷಿಯಾಗಿ ನಿಂತಿದೆ. ಅದರ ನೆರಳಲ್ಲಿ ಪ್ರತಿವರ್ಷ ಅವರ ಜನ್ಮದಿನವನ್ನು ಕನಕಗುರು ಪೀಠದ ನೇತೃತ್ವದಲ್ಲಿ ಕನಕ–ಕೇಶವರ ತೇರನ್ನು ಎಳೆಯುವುದರ ಮೂಲಕ ಸಾಂಕೇತಿಕವಾಗಿ ಆಚರಿಸುತ್ತಾ ಬರಲಾಗುತ್ತಿದೆ. ಇವೆಲ್ಲದರ ಜೊತೆಗೆ, ಕರ್ನಾಟಕದ ಉದ್ದಕ್ಕೂ ಕನಕದಾಸರ ಹೆಸರನ್ನು ಒಳಗೊಂಡ ನೂರಾರು ಊರುಕೇರಿಗಳು ನಿರಂತರ ಅವರ

ಹೆಜ್ಜೆಗುರುತುಗಳನ್ನು ಸ್ಮರಣೆಯಲ್ಲಿ ಇಟ್ಟಿವೆ. ಇದು ಯಾವುದೇ ನಾಡು ಮತ್ತು ನಾಡವರು ಅಲ್ಲಿನ ಸಾಂಸ್ಕೃತಿಕ ನಾಯಕರಿಗೆ ಸಲ್ಲಿಸುವ ಅರ್ಥಪೂರ್ಣ ಗೌರವವಾಗಿದೆ.

**ಡಾ. ಚಿಕ್ಕಮಗಳೂರು ಗಣೇಶ**

**(ಸಂತಕವಿ ಕನಕದಾಸರು ಪುಸ್ತಕದಿಂದ ಆಯ್ದಭಾಗ)**